











# ಕೀಟಗಳ ಒಡನಾಡಿ ಫೇಬರ್

ಬಿ. ಎಸ್. ರುಕ್ಕಮ್ಮ

ನನ್ನ ನಾಡಿನ

ತಂಗಿ ತಮ್ಮಂದಿರಿಗೆ

# ಮುನ್ನುಡಿ

ಕಥೆ ಅಂದರೆ ಸಾಕು ಮಕ್ಕಳಿಗೆ ಅಮಿತವಾದ ಪ್ರೀತಿ. ಊಟ, ತಿಂಡಿ, ನಿದ್ದೆ, ಅಳು—ಎಲ್ಲವನ್ನೂ ಬಿಟ್ಟು ಸುತ್ತ ಬಂದು ಸೇರಿಕೊಳ್ಳುತ್ತಾರೆ. ಅದರಲ್ಲೂ ಪ್ರಾಣಿಗಳ ಕಥೆಗಳನ್ನು ಹೇಳಿದರೆ ಅವರಿಗೆ ಇನ್ನೂ ಸಂತೋಷ. ನರಿರಾಯ, ಮೊಲಣ್ಣ, ಹುಲಿರಾಜ....ಇವರ ಕಥೆಗಳೆಂದರೆ ಇನ್ನೂ ಆಸಕ್ತಿಯಿಂದ ಕೇಳುತ್ತಾರೆ. ಕೇಳುತ್ತಾ, ಕೇಳುತ್ತಾ ತಮ್ಮ ಕಲ್ಪನೆಗಳಿಂದ ಅವುಗಳ ಚಿತ್ರಗಳನ್ನು ಕಟ್ಟಿಕೊಳ್ಳುತ್ತಾರೆ. ಇಲ್ಲವೇ ಚಿತ್ರಕಾರ ಬರೆದ ಮುದ್ದು ಚಿತ್ರಗಳನ್ನು ನೋಡಿ, ಸಂತಸಗೊಂಡು ಕುಣಿದು ಕುಪ್ಪಳಿಸುತ್ತಾರೆ.

ಇದುವರೆಗೆ ನಾವು ಅವರಿಗೆ ಹೇಳಿದ ಕಥೆಗಳೆಲ್ಲಾ ಪ್ರಾಣಿಗಳಿಗೆ ಮನುಷ್ಯಗುಣಗಳನ್ನು ಆರೋಪಿಸಿ ಬರೆದುವು. ಅಲ್ಲಲ್ಲಿ ಆಕಸ್ಮಿಕವಾಗಿ ಅವುಗಳ ನೈಜಸ್ವಭಾವದ ಚಿತ್ರಣ ಬಂದಿರಬಹುದು. ಆದರೆ, ಅವುಗಳ ನಿಜವಾದ ಜೀವನದ ಸಂಗತಿಗಳೇನು? ಆ ಜೀವಿಗಳ ಲೋಕ ಮನುಷ್ಯ ಲೋಕದಷ್ಟೇ ಅದ್ಭುತವಾಗಿಲ್ಲವೆ? ಮನುಷ್ಯನನ್ನು ಆಳುವ ಶಕ್ತಿಗಳು ಅವನ್ನು ಆಳುವುದಿಲ್ಲವೆ? ಅಲ್ಲಿಯ ರೀತಿನೀತಿಗಳೇನು? ಅಲ್ಲಿನ ಜೀವನವೇನು? ಅಲ್ಲಿನ ಸಾಮಾಜಿಕ ವ್ಯವಸ್ಥೆ ಹೇಗೆ? ಎಂಬ ಮುಂತಾದ ಪ್ರಶ್ನೆಗಳಿಗೆ ಉತ್ತರವೇನು?

ಈ ಪ್ರಶ್ನೆಗಳಿಗೆ ಉತ್ತರವಾಗಿ ವಿಜ್ಞಾನಿ ಫೇಬರ್ ಬಂದ. ಆತ ಸಹನೆಯಿಂದ ಸಹಾನುಭೂತಿಯಿಂದ—ತನಗೆ ಬಂದ ನೂರು ಅಡ್ಡಿ ಆತಂಕಗಳನ್ನು ಎದುರಿಸಿ—ಪ್ರಾಣಿ ಪ್ರಪಂಚವನ್ನು ಕಣ್ಣಿಟ್ಟು ನೋಡಿದ. ಅವುಗಳ ರೀತಿನೀತಿಗಳನ್ನು ಕಂಡುಕೊಂಡ. ತಾನು ಹಾಗೆ ಕಂಡದ್ದನ್ನು ಸುಂದರ ಲೇಖನಗಳಾಗಿ ಬರೆದು ಪ್ರಕಟಿಸಿದ. ಅಂತೂ, ಹೀಗೆ ನಮ್ಮನ್ನು ಹೊಸ ಲೋಕದ ಕಡೆಗೇ ಕರೆದೊಯ್ದ. ಅಲ್ಲಿನ ಜೀವನವನ್ನು ತೋರಿಸಿದ.

ಅಲ್ಲಿನ ಜೀವನ ನಾವು ಭಾವಿಸಿದುದಕ್ಕಿಂತ ಸೊಗಸಾಗಿದೆ ಎಂದಮೇಲೆ ಅವನ್ನೇ ಕಥೆಗಳಾಗಿ ನಮ್ಮ ಮಕ್ಕಳಿಗೇಕೆ ಹೇಳಬಾರದು? ಅಲ್ಲಿಗೆ ಸತ್ಯ ದರ್ಶನವೂ ಆಗುತ್ತದೆ; ಮನರಂಜನೆಯೂ ಆಗುತ್ತದೆ. ಜ್ಞಾನಾರ್ಜನೆಯೂ

ಆಗುತ್ತದೆ, ಮಕ್ಕಳಲ್ಲಿ ಆಸಕ್ತಿಯೂ ಕುದುರುತ್ತದೆ. ಇಂತಹ ಆಸಕ್ತಿ ಮಕ್ಕಳನ್ನು ಮುಂದಕ್ಕೆ ನಡೆಸುತ್ತದೆ ಎಂದು ನಂಬಿದ್ದೇನೆ.

ಆದ್ದರಿಂದ ಕನ್ನಡದ ಮಕ್ಕಳಿಗೆ ಆ ಕೀಟಗಳ ಕಥೆಗಳನ್ನು, ಅವುಗಳ ಪರಿಚಯ ಮಾಡಿಕೊಟ್ಟ ಫೇಬರನ ಕಥೆಯನ್ನು ಬರೆದಿದ್ದೇನೆ. ಇದು ಮಕ್ಕಳ ಹಾಗೆ ದೊಡ್ಡವರಿಗೂ ಹಿಡಿಸುತ್ತದೆ ಎಂದು ನಂಬಿದ್ದೇನೆ. ಇಂತಹ ನೂರಾರು ಪುಸ್ತಕಗಳು, ನೂರಾರು ಕಡೆಗಳಿಂದ, ವಿವಿಧ ಭಾಗಗಳಿಂದ ಬರಬೇಕು. ನನ್ನದು ಈ ದಾರಿಯಲ್ಲಿ ಅಳಿಲ ಪ್ರಯತ್ನ ಮಾತ್ರ. ನನಗಿಂತ ಹಿರಿಯರೂ, ಜ್ಞಾನಿಗಳೂ ಆ ಕಡೆ ತಮ್ಮ ಗಮನ ಹರಿಸಲಿ ಎಂದು, ಪ್ರಾರ್ಥಿಸುತ್ತೇನೆ. ಅಲ್ಲಿಯವರೆಗೆ ಈ ಕೃತಿ ಕನ್ನಡದ ಮಕ್ಕಳ ಕೈಯಲ್ಲಿ ಕನ್ನಡದ ಜನರ ಮಡಿಲಲ್ಲಿ ಇರಲಿ ಎಂದು ಹಾರೈಸಿ ನಾನು ಹಿಂದೆ ಸರಿಯುತ್ತೇನೆ.

ಈ ಪುಟ್ಟ ಪುಸ್ತಕಕ್ಕೆ ಅಂದವಾದ ಮುಖಪುಟವನ್ನು ಬರೆದುಕೊಟ್ಟ ಶ್ರೀ ಎಂ. ವಿ. ಶಿವಣ್ಣನವರಿಗೂ, ಪುಸ್ತಕದ ಒಳಗಿನ ಇತರ ಚಿತ್ರಗಳನ್ನು ಸೊಗಸಾಗಿ ಬರೆದುಕೊಟ್ಟ ಶ್ರೀಮಾನ್ ಪಿ. ಆರ್. ತಿಪ್ಪೇಸ್ವಾಮಿಯವರಿಗೂ ನಾನು ಕೃತಜ್ಞಳಾಗಿದ್ದೇನೆ. ಪುಸ್ತಕ ಈ ರೀತಿಯಲ್ಲಿ ರೂಪುಗೊಳ್ಳಲು ನೆರವಿತ್ತ ನನ್ನ ಎಲ್ಲಾ ಹಿರಿ—ಕಿರಿಯ ಆಪ್ತರಿಗೂ, ತಮ್ಮ ಮಾಲೆಯಲ್ಲಿ ಪ್ರಕಟಿಸುವ ಕೃಪೆ ಮಾಡಿದ ನನ್ನ ಗುರುಗಳಾದ ಶ್ರೀ ತ. ಸು. ಶಾಮರಾಯರಿಗೂ, ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿಯವರಿಗೂ ನಾನು ಅತ್ಯಂತ ಕೃತಜ್ಞಳಾಗಿದ್ದೇನೆ.

ಮಹಾರಾಣಿಯವರ ಕಾಲೇಜು
ಮೈಸೂರು ೮-೧೨-೫೯

ಬಿ. ಎಸ್. ರುಕ್ಕಮ್ಮ, ಎಂ. ಎ.

ಆಧಾರ ಗ್ರಂಥಗಳು :

Social Life in the world of insects. by J. H. Fabre
Marvels of the insect World. by J. H. Fabre
The Insect Man. by Eleanor Doorly
Life of the Spider. by John Crompton
Animal Tales. by Ivan T. Anderson

# ಸಂಪಾದಕನ ಅರಿಕೆ

ಸೋದರಿ ಶ್ರೀಮತಿ ಬಿ. ಎಸ್. ರುಕ್ಕಮ್ಮನವರ ಈ ಪುಟ್ಟಪುಸ್ತಕ 'ಕೀಟಗಳ ಒಡನಾಡಿ ಫೇಬರ್' ಅನ್ನು ನಾನು ಅತ್ಯಂತ ಸಂತೋಷದಿಂದ ನನ್ನ ಮಾಲೆಯಲ್ಲಿ ಹೊರತರುತ್ತಿದ್ದೇನೆ. ಶ್ರೀಮತಿಯವರು ಈ ಪುಸ್ತಕ ವನ್ನು ಬರೆಯುತ್ತಿದ್ದಂತೆಯೇ ಆಗಾಗ ಬರೆದಷ್ಟನ್ನು ನನ್ನ ಮುಂದೆ ಓದುತ್ತಿ ದ್ದರು. ಅವರ ಬರವಣಿಗೆಯಲ್ಲಿ ಕಾಣಬರುವ ನಿರೂಪಣಾ ವಿಧಾನ, ನಿರ್ದುಷ್ಟವಾದ ಭಾಷೆ, ಲಲಿತವಾದ ಶೈಲಿಗಳು ನನ್ನ ಮನಸ್ಸನ್ನು ಸೂರೆ ಗೊಂಡುವು. ಅಲ್ಪ ಜೀವಿಗಳೆಂದು ನಾವು ಭಾವಿಸಿರುವ ಚೇಳು, ಕಣಜ, ಬೂವಾಡಿ, ಪತಂಗ, ಜೇಡ—ಇವುಗಳ ಜೀವನದಲ್ಲಿಯೂ ಎಂತಹ ರಸ ಮಯ ಸನ್ನಿವೇಶಗಳಿವೆ, ಅವುಗಳ ನೋವು ನಲಿವು ಆಶೆ ನಿರಾಶೆ, ಅವುಗಳ ಮೈತ್ರಿ, ಪ್ರೇಮಜೀವನ ಮಾನವ ಜೀವನಕ್ಕೇನೂ ಕಡಮೆಯಿಲ್ಲ —ಕಾಣುವ ಕಣ್ಣಿದ್ದರೆ. ಆಲೋಚನಾಪರನಾದವನು ಇದನ್ನು ಓದಿ ಅದ್ವೈತತತ್ವವನ್ನೇ ಅನುಭವ ಮಾಡಿಯಾನು!

ಶ್ರೀಮತಿ ರುಕ್ಕಮ್ಮನವರು ಸುಂದರವಾದ ಈ ಪುಸ್ತಕವನ್ನು ನನ್ನ ಮಾಲೆಯಲ್ಲಿ ಪ್ರಕಟಿಸಲು ಸಂತೋಷದಿಂದ ಒಪ್ಪಿದ್ದಾರೆ. ನಾನು ಅವರಿಗೆ ಋಣಿಯಾಗಿದ್ದೇನೆ. ಕನ್ನಡದಲ್ಲಿ ಜ್ಞಾನ ಸರ್ವತೋಮುಖವಾಗಿ ಬೆಳೆಯ ಹೊರಟಿರುವ ಈ ಪರ್ವಸಮಯದಲ್ಲಿ 'ಕೀಟಗಳ ಒಡನಾಡಿ ಫೇಬರ್' ನಂತಹ ಪುಸ್ತಕ ಜನರಿಗೆ ಅತ್ಯಂತ ಮೆಚ್ಚಿಗೆಯಾವುದೆಂದು ನಾನು ನಂಬಿ ದ್ದೇನೆ. ಇಂತಹ ವಿಜ್ಞಾನದ ಜನಾದರಣೆಯ ಪುಸ್ತಕಗಳು ಕನ್ನಡದಲ್ಲಿ ವಿಪುಲವಾಗಿ ಬೆಳೆಯಲೆಂದು ಹಾರೈಸುತ್ತೇನೆ.

ಈ ಪುಸ್ತಕವನ್ನು ಅಂದವಾಗಿಯೂ, ಅತಿ ಶೀಘ್ರವಾಗಿಯೂ ಅಚ್ಚು ಮಾಡಿಕೊಟ್ಟ ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನವರನ್ನು ಅಭಿನಂದಿಸುತ್ತೇನೆ.

ತ. ಸು. ಶಾಮರಾಯ
ಸಂಪಾದಕ

# ಚೇಳಿನ ಕಥೆ

ಯಾದವಗಿರಿಯ ತಿಟ್ಟನ್ನು ಸ್ಪರ್ಧೆಯಿಂದ ಏರುತ್ತಾ ಆ ತಿರುವಿನಲ್ಲಿ ಮರೆಯಾದರು ಇಬ್ಬರು ಮಕ್ಕಳು. ಹತ್ತು, ಹನ್ನೊಂದು ವರ್ಷದ ಆ ಬಾಲು, ವಸಂತಿಯರಿಗೆ ತಮ್ಮ ಅಕ್ಕನಿಗಿಂತಲೂ ಮೊದಲು ಹೋಗಿ ಆ ಕಲ್ಲಿನ ರಾಶಿಯ ಮೇಲೆ ಕೂಡುವ ಆಸೆ. ಅವರ ಹಿಂದೆ ಸ್ವಲ್ಪ ದೂರದಲ್ಲಿ ಪುಟ್ಟ ಶ್ರೀನಿವಾಸನೊಡನೆ ಮಾತನಾಡುತ್ತಾ ನಿಧಾನವಾಗಿ ಬರುತ್ತಿದ್ದ ಶ್ರೀಮತಿ–ಅವರ ಅಕ್ಕ—ಪ್ರತಿ ಭಾನುವಾರವೂ ಅವರಿಗೆ ಒಂದೊಂದು ಕಥೆ ಹೇಳುವ ವಾಡಿಕೆಯಿತ್ತು. ಇವತ್ತು ಎಂತಹ ಸೊಗಸಿನ ಕಥೆ ಕಾದಿರ ಬಹುದು ಎಂಬುದನ್ನು ಅವರಿಬ್ಬರೂ ಚರ್ಚಿಸಿ ತೀರ್ಮಾನ ಮಾಡಲು ಅಷ್ಟು ಮುಂದೆ ಹೋದರು.

ಅಲ್ಲೆಲ್ಲೋ ಕುಳಿತು ಚರ್ಚೆ ಮಾಡುವುದೇನು, ಅಕ್ಕನನ್ನೇ ಮೆಲ್ಲಗೆ ಕೇಳಿದರೆ ಹೇಳುತ್ತಾಳೆ ಎಂದುಕೊಂಡು ಶ್ರೀನಿವಾಸ, ಇವತ್ತು, ಅವಳ ಜೊತೆಗೇ ಹೆಜ್ಜೆ ಹಾಕುತ್ತಿದ್ದ.

"ನೋಡಕ್ಕ ನೀನು ಇದುವರೆಗೂ ಹೇಳಿರದಂತಾ ಒಳ್ಳೆಯ ಕಥೆ ಹೇಳಬೇಕು ಇವತ್ತು."

"ಅಂದರೆ? ಎಂದೂ ನಡೆಯದೇ ಇರೋ ಕಥೆಯೇ?"

"ಉಹೂಂ. ಬೇಡ....ನಡೆದಿರಬೇಕು. ಪೂರ ನಿಜವಾಗಿರಬೇಕು. ಮತ್ತೆ ತುಂಬಾ ಚೆನ್ನಾಗಿರಬೇಕು."

"ಹ್ಞೂ. ಆಗಲಿ. ಕಲ್ಲಿನ ರಾಶಿ ಇನ್ನೇನು ಸಿಕ್ಕಿತಲ್ಲ. ಸರಿಯಾದ ಜಾಗ ಆರಿಸಿಕೊಂಡು ಕೂತುಕೋ....ಓಡು. ಇವತ್ತು ದೊಡ್ಡ ಕಥೆ ಹೇಳೋಣಂತೆ."

ಹಾರಿದ ಶ್ರೀನಿವಾಸ. "ನಾನೇ ಗೆದ್ದೆ. ಎಂಥಾ ಕಥೆ ಅನ್ನೋದು ನನಗೆ ಗೊತ್ತಾಗಿದೆ."

"ಹ್ಞೂ. ಎಂಥಾದ್ದು?"

"ತಾಳಿ, ಮೊದಲು ಒಳ್ಳೆಯ ಜಾಗ ಹುಡುಕಿ, ಆಮೇಲೆ ಬೇರೆ

ಮಾತು. ಈ ಕಲ್ಲು ಒಳ್ಳೆ ಅಗಲವಾಗಿದೆ. ನಿನ್ನ ಕಲ್ಲೂ ಈ ಕಡೆ ಉರುಳಿಸೋ...."

"ಏನು ಮಾಡ್ತೀರಿ? ಮುಕ್ಕಿರೀತಾ ಇದ್ದೀರಲ್ಲ....ಕಲ್ಲು ಸರಿ ಮಾಡ್ತೀರಾ ಜೋಪಾನ...."

ಅಷ್ಟರಲ್ಲಿ ಮೂವರೂ ಒಟ್ಟಿಗೆ ಕಿರುಚಿ ಹಿಮ್ಮೆಟ್ಟಿದರು. "ಚೇಳು.... ನೋಡಕ್ಕಾ ಚೇಳು....ದೂರ ಬಾ...."

"ಚೇಳೆ! ಅದಕ್ಯಾಕೆ ಹೆದರ್ತೀರಿ....ತಾಳಿ ಅದರ ವಿಷಯ ನಿಮಗೆ ಗೊತ್ತಿಲ್ಲ. ಒಳ್ಳೆ ತಮಾಷೆಯಾಗಿದೆ. ಅದರ ಬಾಲಕ್ಕೆ ಹುಷಾರಾಗಿ ಒಂದು ದಾರ ಕಟ್ಟಿ ನೋಡೋಣ ಹೇಗಿದೇಂತ. ನನ್ನ ರಿಬ್ಬನ್ನೇ ಸಾಕು ಉದ್ದ ವಾಗಿದೆ. ಈಗ ನೋಡಿ ಅದಕ್ಕೆಷ್ಟು ಸಿಟ್ಟು ಬಂದರೂ ನಮ್ಮನ್ನು ಕುಟುಕೋ ಹಾಗಿಲ್ಲ. ನಮ್ಮ ಕೈಯಿಂದ ತಪ್ಪಿಸಿಕೊಳ್ಳೋ ಹಾಗೂ ಇಲ್ಲ.

ಮಹಾಭಯಂಕರ ಪ್ರಾಣಿ ಇದು. ಅದರ ಆಯುಧ ಯಾವುದು ಗೊತ್ತೇನು? ಬೆನ್ನಿನ ಮೇಲೆ ಬಾಗಿಕೊಂಡಿದೆಯಲ್ಲ, ಅದೇ, ಆ ಬಾಲದ ಕೊಂಡಿಯೇ, ಅದರ ಈಟಿ. ಅದರ ತುದಿಯಲ್ಲಿ ವಿಷದ ಹನಿ ಕಾದಿರುತ್ತದೆ. ಯಾವಾಗಲೂ ತನ್ನ ಬಿಲದ ಬಾಯಲ್ಲೆ ಇಕ್ಕಳದಂಥ ಪಂಜಗಳನ್ನಿಟ್ಟು ಕೊಂಡು ಯಾರಾದರೂ ಸಿಕ್ಕಿಯಾರೇ ಎಂದುಕೊಂಡು ಕಾದಿರುತ್ತದೆ.

ಮಹಾ ಅನರ್ಥದ್ದು ತನ್ನ ಪಾಡಿಗಿರಲಿ ಬಿಡಿ. ಇವು ಎಂಥಾ ಏಕಾಂತ ಪ್ರಿಯರು ಅಂದರೆ ಅದೇ ಒಂದು ಕಥೆ. ಬೇಕಾದರೆ ಹುಡುಕಿ ನೋಡಿ ಒಂದು ಕಲ್ಲಿನಡಿಯಲ್ಲಿ ಎರಡು ಚೇಳು ಇರೋದೇ ಇಲ್ಲ. ಒಂದು ವೇಳೆ ಇದ್ದರೆ ಒಂದನ್ನು ಇನ್ನೊಂದು ತಿನ್ನುತ್ತಿರುತ್ತದೆ. ಇದು ನನ್ನ ಮಧ್ಯದ ಕೈಬೆರಳಿನಷ್ಟು ಉದ್ದವಿದೆ. ಸುಮಾರು ೭-೮ ಸೆಂಟಿಮೀಟರ್ ಉದ್ದ ಇರಬಹುದು. ಸ್ವಲ್ಪ ಮಾಸಲು ಹಳದಿ ಬಣ್ಣ. ಯಾವ ಶತ್ರುವೇ ಸಿಗಲಿ ಅದನ್ನು ತನ್ನ ಮುಂದಿನ ಪಂಜಗಳಿಂದ ಅಲ್ಲಾಡದ ಹಾಗೆ ಹಿಡಿದು, ಕೊಂಡಿಯಿಂದ ಕುಟುಕಿ ವಿಷ ಹಾಕಿಬಿಡುತ್ತದೆ.

ನೋಡಿ ಅದಕ್ಕೆ ಎಂಟು ಕಣ್ಣಿವೆ. ಮಧ್ಯದಲ್ಲಿ ತಲೆ, ಹೊಟ್ಟೆ ಎಲ್ಲವೂ ಆಗಿದೆಯಲ್ಲ ಆ ವಿಚಿತ್ರ ಭಾಗದಲ್ಲಿ ಎರಡು, ಮಿಕ್ಕ ಆರು ಒಂದೊಂದು ಕಡೆಗೆ ಮೂರರ ಹಾಗೆ, ಬಾಯಿಯ ಕಮಾನಿನ ಮೇಲಿವೆ.

ಆದರೆ ಎಂಟೊ ನಾಲುಗಣ್ಣು. ಪಾಪ ಚೇಳಿಗೆ ಅಷ್ಟೊಂದು ಕಣ್ಣಿದ್ದೂ ದೃಷ್ಟಿ ಮಂದ. ಮೆಳ್ಳೆಗಣ್ಣು. ಕುರುಡನ ಹಾಗೆ ತಡವರಿಸಿಕೊಂಡೇ ಓಡಾಡಬೇಕು.

"ಮತ್ತೆ ಇದೆಲ್ಲ ನಿಂಗೆ ಹೇಗೆ ಗೊತ್ತಾಯಿತು?" ಕೇಳಿದ ಬಾಲು.

"ಇದನ್ನೆಲ್ಲ ಜೀನ್‌ಹೆನ್ರಿ ಫೇಬರ್ ಅಂತ ಒಬ್ಬ ವಿಜ್ಞಾನಿ ಬರೆದಿದ್ದಾನೆ. ಚಿನ್ನದಂಥ ಮನುಷ್ಯ. ಇಂತಹ ಪ್ರಾಣಿಗಳು, ಕೀಟಗಳನ್ನು ಕಂಡರೆ ಅವನಿಗೆಷ್ಟು ಪ್ರೀತಿಯೋ. ಮೊನ್ನೆ ಮೊನ್ನೆ ಅಂದರೆ ಸುಮಾರು ನಲವತ್ತು ವರ್ಷಗಳ ಕೆಳಗೆ ಇದ್ದ ಫ್ರಾನ್ಸ್ ದೇಶದವನು."

"ಹ್ಞು. ಅವನೇನು ಹೇಳಿದ್ದಾನೆ!" ಸೀನು ಆತುರಪಟ್ಟ.

"ಅವನು ಬೇರೆ ಹಳ್ಳಿಗೆ ಹೋಗಿದ್ದಾಗ ಅಲ್ಲಿ ಒಂದಷ್ಟು ಚೇಳುಗಳನ್ನು ಹಿಡಿದುಕೊಂಡು,

"ಅಬ್ಬಬ್ಬಾ ಚೇಳು ಹೇಗಪ್ಪ ಹಿಡುಕೊಳ್ಳೋದು?"

"ಇಕ್ಕಳ ತೆಗೆದುಕೊಂಡು ಅದರ ಬಾಲ ಮೊದಲು ಹಿಡಿದು ದಪ್ಪ ಕಾಗದದ ಚೀಲಗಳಲ್ಲಿ ಅದನ್ನು ತಲೆಕೆಳಗಾಗಿ ನೂಕಿ....ಆ ಚೀಲಗಳನ್ನು ಟಿನ್ನಿನ ಪೆಟ್ಟಿಗೆಯಲ್ಲಿಟ್ಟುಕೊಂಡರೆ ಆಯಿತು. ಅವನು ಮಾಡಿದ್ದೇ ಹೀಗೆ.

"ಊಂ ಆಮೇಲೆ?"

"ಅವನ್ನು ತನ್ನ ಕೈತೋಟಕ್ಕೆ ತೆಗೆದುಕೊಂಡು ಹೋಗಿ ಕೆಲವಕ್ಕೆ ಅನುಕೂಲವಾದ ಜಾಗ ಮಾಡಿಕೊಟ್ಟು ಅವು ಸ್ವತಂತ್ರವಾಗಿರಲು ಬಿಟ್ಟ. ಇನ್ನು ಕೆಲವನ್ನು ಬೋನುಗಳಲ್ಲಿಟ್ಟ. ಹಾಗೆ ತಮ್ಮ ಪಾಡಿಗಿರಲಿ ಎಂದು ಬಿಟ್ಟವುಗಳೆಲ್ಲ ತಪ್ಪಿಸಿಕೊಂಡು ಹೊರಟು ಹೋದುವು. ಬೋನಿನಲ್ಲಿದ್ದುವುಗಳೆಲ್ಲ ಅಷ್ಟು ಸಣ್ಣ ಜಾಗದಲ್ಲಿರುವ ಮನಸ್ಸಾಗದೆ ಆಹಾರ ಬಿಟ್ಟು ಮಂಕಾದುವು. ಆದ್ದರಿಂದ ಅವಕ್ಕೆ ಸಣ್ಣದೊಂದು ಗಾಜಿನ ಅರಮನೆ ಮಾಡಿ ಅದರಲ್ಲಿಟ್ಟಾಗ ಕೆಲವು ಅಲ್ಲಿಂದಲೂ ತಪ್ಪಿಸಿಕೊಂಡುವು. ಆ ಗಾಜಿನ ಗೋಡೆಗಳಿಗೆ ಮರದ ಚೌಕಟ್ಟೆತ್ತಲ್ಲ, ಅವುಗಳ ಮೇಲಿಂದ ಅವು ಹತ್ತಿ ತಪ್ಪಿಸಿಕೊಳ್ಳುತ್ತಿದ್ದುವು. ಆದ್ದರಿಂದ ಫೇಬರ್ ಆ ಚೌಕಟ್ಟೆಗೆಲ್ಲ ಟಾರು ಬಳಿದ. ಆಗಲೂ ಅವು ತಪ್ಪಿಸಿಕೊಂಡುವು. ಅದರಿಂದ ಆ ಚೌಕಟ್ಟಿಗೆ ಎಣ್ಣೆ ಮತ್ತು ಸೋಪು ಹಚ್ಚಿದ. ಆಗಲೂ ಅವು ಸೋಲಲಿಲ್ಲ. ಕೊನೆಗೆ

ಗಾಜಿನಂಥ ಕಾಗದಕ್ಕೆ ಮಸಿ ಹಿಡಿಸಿ ಅದಕ್ಕೆ ಸುತ್ತಿದಾಗ ಅವು ದಿಕ್ಕೆಟ್ಟು ಸುಮ್ಮನಾದುವು.

ಆ ಪುಟ್ಟ ಅರಮನೆಯ ನೆಲಕ್ಕೆ ಮರಳಿನ ಹಾಸಿಗೆ. ಅಲ್ಲಲ್ಲಿ ಒಡೆದ ಹೂವಿನ ಕುಂಡಗಳಿಂದ ಮೂಡಿದ ಇಪ್ಪತ್ತು ನಾಲ್ಕು ಗುಹೆಗಳು. ಅವುಗಳ ಮಧ್ಯದಲ್ಲಿ ಉದ್ದವಾದ ವರಾಂಡಗಳು, ಕಾಲುದಾರಿಗಳು. ಈ ಸೆರೆಯಾಳುಗಳೆಲ್ಲ ವಿಧಿಯಿಲ್ಲದೆ ಅಲ್ಲೇ ವಾಸ ಹೂಡಲಾರಂಭಿಸಿದುವು. ಒಡಕು ಹೂ ಕುಂಡಗಳ ಕೆಳಭಾಗವನ್ನು ತೋಡಲಾರಂಭಿಸಿದುವು. ಸೊಗಸಾದ ನೆರಳಿನ ಮನೆ ಬೇಡವೇ ಅವಕ್ಕೆ? ಅವು ತಮ್ಮ ನಾಲ್ಕನೆಯ ಜೊತೆ ಕಾಲುಗಳ ಮೇಲೆ ನಿಂತು ಉಳಿದ ಮೂರು ಜೊತೆ ಕಾಲುಗಳಿಂದ ನೆಲ ತೋಡುತ್ತವೆ. ತಮ್ಮ ಉದ್ದವಾದ ಕೈಗಳಿಂದ ಎಂದಿಗೂ ನೆಲ ಅಗೆಯುವುದಿಲ್ಲ. ಅವು ಇರುವುದು ಯುದ್ಧ ಮಾಡುವುದಕ್ಕೆ ಅಥವಾ ತಡವರಿಸಿಕೊಂಡು ನಡೆಯುವುದಕ್ಕೆ. ತಾವು ಅಗೆದ ಮಣ್ಣು, ಕಸ ಎಲ್ಲವನ್ನೂ ಬಾಲದಿಂದ ನೂಕುತ್ತವೆ. ಬಾಲದಿಂದ ಎಷ್ಟು ದೂರ ಬೇಕೋ ಅಷ್ಟು ದೂರ ತಳ್ಳುವುದಕ್ಕಾಗದಿದ್ದರೆ ತಾವೇ ಹೊರಕ್ಕೆ ಬಂದು ಮನಸ್ಸಿಗೆ ತೃಪ್ತಿಯಾಗುವವರೆಗೂ ತಳ್ಳಿ ಆಮೇಲೆ ಮತ್ತೆ ಅಗೆಯುವುದಕ್ಕೆ ಹೊರಡುತ್ತವೆ.

ಚೇಳುಗಳು ಉಪವಾಸ ಮಾಡುವುದರಲ್ಲಿ ಮಹಾ ಗಟ್ಟಿಗರು. ಅವು ರಾಕ್ಷಸರಂತೆ ಹಾಕಿದ್ದನ್ನೆಲ್ಲ ತಿಂದು ಪೂರೈಸಿರುತ್ತವೇನೋ ಎಂದು ನೋಡಿದಾಗ, ಅವು ವಿರಕ್ತರಂತೆ ಸಣ್ಣ ಪುಟ್ಟ ಚೂರುಗಳನ್ನು ಅಲ್ಲಲ್ಲಿ ಎರಚಾಡಿದ್ದುವು. ಫೇಬರ್ ನೋಡೋಣ ಎಂದು ಆಹಾರಕ್ಕಾಗಿ ಬಹು ಸ್ವಲ್ಪ ತಿನಿಸನ್ನು ಕೊಟ್ಟಾಗ ನಿರ್ದಾಕ್ಷಿಣ್ಯವಾಗಿ ಬಾಲದಿಂದ ಅದನ್ನು ಒತ್ತರಿಸಿಬಿಟ್ಟುವು. ಅಕ್ಟೋಬರಿನಿಂದ ಹಿಡಿದು ಏಪ್ರಿಲಿನವರೆಗೆ ಅಂದರೆ ಏಳು ತಿಂಗಳ ಕಾಲ, ಅವು ಏನನ್ನೂ ತಿನ್ನಲೇ ಇಲ್ಲ. ಮಾರ್ಚ್ ತಿಂಗಳ ಕೊನೆ ಕೊನೆಗೆ ಅವು ಸಣ್ಣ ಸಣ್ಣ ತುಣುಕುಗಳನ್ನು ಬಾಯಾಡುತ್ತಿದ್ದುವು.

ಒಂದು ಸಲ ನೋಡೋಣ ಏನಾಗುತ್ತದೆ ಎಂದು ಕೆಲವು ಕಾಡು ಚಿಮ್ಮಂಡೆ (field crickets) ಗಳನ್ನು ಅವಕ್ಕೆ ಆಹಾರವಾಗಿಟ್ಟ ಫೇಬರ್. ತಿಂದರೆ, ಬೆಣ್ಣೆಯ ಮುದ್ದೆಯ ಹಾಗೆ ಕರಗಬೇಕು, ಅಂಥವನ್ನು ಆರಿಸಿಟ್ಟಿದ್ದ. ಸಾಯುವ ಗಳಿಗೆಯವರೆಗೂ ತಾವಿರುವುದು ರಾಕ್ಷಸರ ದವಡೆಯಲ್ಲಿ ಎನ್ನುವ

ಆತಂಕವಿಲ್ಲದೆ ಅವು ಹಾಯಾಗಿರಲಿ ಎಂದು ಅವನ್ನು ಕೆಲವು ಲೆಟಿಸ್ ಎಲೆಗಳ ಜೊತೆಯಲ್ಲಿಟ್ಟ. ಆ ಮುಗ್ಧ ಜೀವಿಗಳು ಎಂತಹ ಘೋರವಾದ ನೆರೆಯಲ್ಲಿದ್ದೇವೆ ಎಂಬುದನ್ನೇ ತಿಳಿಯದೆ ಹಾಡುತ್ತಾ ತಮ್ಮ ಆ ಲೆಟಿಸ್ ಎಲೆಗಳ ಕೋಸುಂಬರಿಯನ್ನು ಅಗಿಯುತ್ತಿದ್ದುವು. ಚೇಳುಗಳು ಅತ್ತಿತ್ತ ಓಡಾಡಿದಾಗ ಇವೂ ಆ ಕಡೆ ನೋಡಿ ತಮ್ಮ ಮಿಾಸೆಯನ್ನು ತಿರುಗಿಸುತ್ತಿದ್ದುವು. ಆ ರಾಕ್ಷಸ ಚೇಳುಗಳು ಇವುಗಳ ಕಡೆ ನೋಡಿ ಹಿಮ್ಮೆಟ್ಟಿದವು. ಹೊಸಬರು! ಹೇಗೋ ಏನೋ ಎಂದು ಅವಕ್ಕೆ ಭಯ.

ಆದರೆ ಚೇಳಿಗೆ ಬಹು ಇಷ್ಟವಾದ ತಿಂಡಿ ಜೀರುಂಡೆ. ಅದು ಸಿಕ್ಕರೆ, ಆಗ ಅದರ ಕಥೆಯೇ ಬೇರೆ. ಚೇಳು ಮೇಲೆ ಬಿದ್ದಾಗ ಜೀರುಂಡೆ ತೆಪ್ಪಗಿರುತ್ತದೆ. ಅದೇನು ಬೇಟೆಯಲ್ಲ. ಕಿತ್ತುಕೊಂಡು ತಿನ್ನೋದಷ್ಟೆ. ಏನೂ ಅವಸರವಿಲ್ಲ, ಪ್ರಯಾಸವೂ ಇಲ್ಲ. ಬಾಲವನ್ನು ಕೂಡ ಅಲ್ಲಾಡಿಸಬೇಕಿಲ್ಲ ಎಂದಮೇಲೆ ವಿಷ ಹಾಕುವುದೆಲ್ಲಿ ಬಂತು. ತನ್ನ ಎರಡು ಬೆರಳಿನ ಕೈಗಳಿಂದ ಆ ರಸಕವಳವನ್ನು ಬಾಯಿಗೆ ಹಿಡಿದು ಸ್ವಲ್ಪವೂ ಮೈ ಅಲ್ಲಾಡಿಸದೆ ತಿಂದು ಹಾಕುತ್ತದೆ. ಆದರೆ ಕೆಲವು ಬಡಪಾಯಿ ಜೀರುಂಡೆಗಳು ಹೆಣಗಾಡಿ ಅಡಿಪಡಿಸಿದರೆ ಚೇಳು ತನ್ನ ಬಾಲದಿಂದ ಅದರ ಬಾಯನ್ನು ಒಂದೇ ಬಾರಿ ಇರಿಯುತ್ತದೆ. ಅಲ್ಲಿಗೆ ಜೀರುಂಡೆ ತೆಪ್ಪಗಾಗುತ್ತದೆ. ಅಲ್ಲಿಂದ ಮುಂದೆ ಹಬ್ಬದೂಟ. ಚೇಳು ಆಗೀಗ ತನ್ನ ಬಾಲದಿಂದ ಆ ಪ್ರಾಣಿಯನ್ನು ಮೆಲ್ಲಗೆ ಮುಟ್ಟಿ ಮುಟ್ಟಿ ನೋಡುತ್ತದೆ. ಗಂಟೆಗಟ್ಟಲೆ ನೋಡಿ ಹುಷಾರಾಗಿ ಸ್ವಲ್ಪ ಸ್ವಲ್ಪವಾಗಿ—ನಾವು ಚಮಚದಲ್ಲಿ ತಿಂದಹಾಗೆ—ತಿನ್ನುತ್ತದೆ. ಎಲ್ಲ ತಿಂದು ಸ್ವಲ್ಪ ಸುಧಾರಿಸಿಕೊಂಡಮೇಲೆ ಮುದುಕರು ಕಡ್ಡಿಯಿಂದ ಹಲ್ಲುಚುಚ್ಚಿಕೊಂಡಹಾಗೆ ತನ್ನ ಬೆರಳಿನಿಂದ ಬಾಯಲ್ಲಿ ಉಳಿದುಕೊಂಡ ಚೂರು ಪಾರನ್ನು ತೆಗೆಯುತ್ತಾ ಕುಳಿತುಕೊಳ್ಳುತ್ತದೆ. ಆಮೇಲೆ ಎಷ್ಟೋ ಹೊತ್ತಿನ ವರೆಗೆ ಅದು ಏನನ್ನೂ ತಿನ್ನುವುದಿಲ್ಲ.

ಆದರೆ ಮೇ ತಿಂಗಳಲ್ಲಿ ಮರಿ ಹಾಕುವ ಕಾಲ ಹತ್ತಿರವಾದಾಗ ಈ ಮಿತಾಹಾರಿಗಳೆಲ್ಲ ದುರಾಸೆಯ ಮೊಟ್ಟೆಗಳಾಗುತ್ತವೆ. ಹೆಣ್ಣು ಚೇಳುಗಳಂತೂ ಆಟವೊ ಎನ್ನುವ ಹಾಗೆ ಇತರ ಚೇಳುಗಳನ್ನು ತಿನ್ನುತ್ತಿರುತ್ತವೆ. ಅಂತಹ ಊಟ ಮಾಡಬೇಕಾದರೆ ಆ ಹೊಟ್ಟೆ ಇನ್ನೆಂಥ ಗುಡಾಣವೋ ಏನೊ!

ಫೇಬರ್ ಒಮ್ಮೊಮ್ಮೆ ನೋಡೋಣ ಏನಾಗುತ್ತದೆ ಎಂದು ಕೆಲವು ದೊಡ್ಡ ಕೀಟಗಳನ್ನು ರೇಗಿಸಿ ಚೇಳಿನ ಜೊತೆಗೆ ಕಾಳಗವಾಡಲು ಬಿಡುತ್ತಿದ್ದ. ಚೇಳು ಯಾವಾಗಲೂ ಸ್ವಲ್ಪ ಹೇಡಿ. ಆದ್ದರಿಂದ ಅದನ್ನು ಕೀಟಗಳ ವಿರುದ್ಧ ವಾಗಿ ಸೆಣಸುವಂತೆ ರೇಗಿಸುತ್ತಿದ್ದ. ಇಂಥ ಹೋರಾಟದಲ್ಲಿ ಯಾವಾಗಲೂ ಚೇಳೇ ಗೆಲ್ಲುತ್ತಿದ್ದುದು. ಸೋತ ಪ್ರಾಣಿಯನ್ನು ಈ ಚೇಳು ಬಾಯಿಗೆ ಹಾಕಿಕೊಂಡು ಅಗಿದುಬಿಡುತ್ತಿತ್ತು. ಆದರೆ ಚೇಳುಗಳು ಇತರ ಪ್ರಾಣಿ ಗಳಂತೆ ಹೊಟ್ಟೆಬಾಕರಲ್ಲ. ತೀರ ರೇಗಿಸಿದ ಶತ್ರುಗಳನ್ನೂ, ತಮ್ಮ ಗಂಡಂದಿರನ್ನೂ ತಿನ್ನುವ ಅಭ್ಯಾಸ ಇಟ್ಟವೆ ಅಷ್ಟೆ.

ವಸಂತಋತು ಪ್ರಾರಂಭವಾದಾಗ, ಅಂದರೆ, ಏಪ್ರಿಲಿನ ಮಧ್ಯಭಾಗದ ವೇಳೆಗೆ, ಪುಟ್ಟ ಗಾಜಿನ ಅರಮನೆಯಲ್ಲಿ ಚಟುವಟಿಕೆ ಕಾಣುತ್ತದೆ. ಬೆಳಗಿನ ಹೊತ್ತು ಮರುಭೂಮಿಯ ಹಾಗಿರುವ ಅರಮನೆಯಲ್ಲಿ ಸಂಜೆ ಏಳರಿಂದ ಒಂಭತ್ತರವರೆಗೆ ಆನಂದವೋ ಆನಂದ. ಸಂಜೆಯ ಊಟ ಮುಗಿಸಿಕೊಂಡು ಫೇಬರಿನ ಮನೆಯವರೆಲ್ಲ ಲಾಟೀನು ಹಿಡಿದುಕೊಂಡು ಅವುಗಳ ಕುಣಿದಾಟ ವನ್ನು ನೋಡುತ್ತಿದ್ದರು. ಅದೇ ಅವರ ಪಾಲಿಗೆ ನಾಟಕವಾಗಿತ್ತು. ಅವರ ಮನೆಯ ನಾಯಿ ಟಾಮ್ ಕೂಡ ತನ್ನ ಥಳಥಳಿಸುವ ಕಣ್ಣುಗಳಿಂದ ಆ ಆಟವನ್ನು ನೋಡುತ್ತಿತ್ತು.

ಬೆಳಕಿರುವ ಕಡೆ ಗಾಜಿನ ಗೋಡೆಯ ಹತ್ತಿರ ಚೇಳುಗಳ ಸಭೆ ಸೇರಿತ್ತು. ಬೇರೆ ಎಲ್ಲಾ ಕಡೆಗಳಲ್ಲಿಯೂ ಚೇಳುಗಳು ಒಂಟೊಂಟಿಯಾಗಿ ವಿಹಾರಮಾಡುತ್ತಿದ್ದವು. ಕೊನೆಗೆ ಬೆಳಕಿನಿಂದ ಅವು ಆಕರ್ಷಿತವಾಗಿ ಈ ನಾಟ್ಯದಲ್ಲಿ ಸೇರಿಕೊಂಡುವು. ಹೊಸಬರು ಈ ಗುಂಪಿಗೆ ಬಂದು ಸೇರೋ ದೇನು; ಹಳಬರು ಕುಣಿದಾಟದಿಂದ ಸುಸ್ತಾಗಿ ಸ್ವಲ್ಪ ಹೊತ್ತು ನೆರಳಲ್ಲಿ ವಿಶ್ರಾಂತಿ ತೆಗೆದುಕೊಳ್ಳೋದೇನು ?

ಆ ದುಷ್ಟ ಪ್ರಾಣಿಗಳು ಸಂತೋಷದಲ್ಲಿ ಮೈಮರೆತು ಕುಣಿದುವು. ತಮ್ಮದೇ ತಾಳಕ್ಕೆ ಅವು ನಿಧಾನವಾಗಿ ಕುಣಿಯುವುದೇ ಒಂದು ಚಂದ. ಅವು ತಮ್ಮ ಗುಹೆಗಳಿಂದ, ನೆರಳುಗಳಿಂದ ನಿಧಾನವಾಗಿ, ಗಂಭೀರವಾಗಿ ಹೊರಟು ಗುಂಪು ಸೇರಲು ಇನ್ನು ಸ್ವಲ್ಪವೇ ದೂರವಿದೆ ಎನ್ನಬೇಕಾದರೆ ಇದ್ದಕ್ಕಿದ್ದಂತೆ ಓಡಿ ಗುಂಪಿನೊಳಕ್ಕೆ ಜಾರುತ್ತಿದ್ದುವು. ಅಂತಹ ದಿನಗಳಲ್ಲಿ

ಚೇಳುಗಳಿಗೆ ಇಲಿಗಳನ್ನೂ ಮೀರಿಸಿದ ಚಟುವಟಿಕೆ. ಅದೋ ಯಾವುದೋ ಒಂದು, ಜೊತೆಗಾತಿಯನ್ನು ಹುಡುಕಿ ಅವಳ ಕೈ ಹಿಡಿಯಲು ಹೋಗಿ ಅದರ ಬೆರಳುಗಳನ್ನು ಮುಟ್ಟಿತು. ಬೆಂಕಿ ತಗುಲಿದಂತೆ ಆ ಹೆಣ್ಣು ಚೇಳು ಕೊಸರಿಕೊಂಡು ಒಂದು ಕ್ಷಣದಲ್ಲಿ ಮಾಯವಾಯಿತು. ಅವುಗಳಲ್ಲಿ ಕೆಲವು ಜೊತೆಯಾಗಿ ತಿರುಗಾಡುತ್ತಿದ್ದುವು. ಇದ್ದಕ್ಕಿದ್ದಂತೆ ದಿಕ್ಕಾಪಾಲಾಗಿ ಓಡಿ, ಒಂದರ ಕಾಲಿಗೊಂದು ಸಿಕ್ಕಿ, ಗೊಂದಲವಾಗಿ, ಕೊನೆಗೆ ಗೂಡು ಸೇರುತ್ತಿದ್ದುವು. ಕೆಲವು ಬಾರಿ ಅಲ್ಲಿ ನಿಜವಾಗಿ ಹೊಡೆದಾಟವೇ ಶುರುವಾಗುತ್ತಿತ್ತು. ಆಗ ಎಲ್ಲಿ ನೋಡಿದರೂ ಚಿಮುಟದಂಥ ಬೆರಳುಗಳು, ಮೇಲೆತ್ತಿದ ಬಾಲದ ಕೊಂಡಿಗಳು. ಅಂಥಾ ಹೊಡೆದಾಟದಲ್ಲೂ ಅವುಗಳ ಕಣ್ಣು ಚುಕ್ಕೆಗಳು ಮಾಣಿಕ್ಯದ ಹಾಗೆ ಥಳಥಳ ಅಂತಿರುತ್ತವೆ. ಆ ಚುಕ್ಕೆಗಳು ಚೇಳಿನ ಸಂಯುಕ್ತಾಕ್ಷಿಗಳ ಒಂದು ಭಾಗ.

"ಸಂಯುಕ್ತಾಕ್ಷಿ ಅಂದರೇನು?" ಕೇಳಿದ ಬಾಲು.

"ಅಂದರೆ ಅನೇಕ ಕಣ್ಣುಗಳು ಸೇರಿ ಒಂದೇ ಕಣ್ಣಾಗಿರುತ್ತದೆ. ಆದರೆ ಯಾವ ಕಣ್ಣಿಗೂ ನೋಟ ಸ್ಫುಟವಾಗಿ ಕಾಣುವುದಿಲ್ಲ. ಅವನ್ನು ಸಂಯುಕ್ತಾಕ್ಷಿ ಎನ್ನುತ್ತಾರೆ."

"ಹುಂ....ಆಮೇಲೆ. ಆ ಜಗಳದಲ್ಲಿ ಅರ್ಧ ಮುಕ್ಕಾಲು ಪ್ರಾಣಿಗಳೆಲ್ಲ ಸತ್ತೇಹೋಗಿರಬೇಕು!" ಎಂದಳು ವಸಂತಿ.

"ಹೂಂ. ಹಾಗೇ ಅನ್ನಿಸುತ್ತೆ. ಎಂಥಾ ಮಾರಾಮಾರಿ! ಸಣ್ಣದು ದೊಡ್ಡದು ಎಲ್ಲ ಸೇರಿರುತ್ತವೆ. ಏನು ಒಂದು ಕಗ್ಗೊಲೆಯೇ ನಡೆದಿರಬೇಕು ಅನ್ನಿಸಿದರೂ, ಅದೆಲ್ಲ ಬರಿಯ ಹುಚ್ಚಾಟ. ಯಾವುದಕ್ಕೂ ಒಂದು ಸಣ್ಣ ಗಾಯ ಇರಲಿ ಉಳುಕಿರೋದಿಲ್ಲ ಕೂಡ.

ಓಡಾಟವೋ ಓಡಾಟ. ದಾರಿಯಲ್ಲಿ ಒಂದಕ್ಕೊಂದು ಮುಖ ಮುಖ ನೋಡುತ್ತವೆ. ಹೋಗುವ ಅವಸರದಲ್ಲಿ ಒಂದರ ಬೆನ್ನಮೇಲೆ ಮತ್ತೊಂದು ಓಡುತ್ತದೆ. ಆದರೆ ಅದರಿಂದ ಯಾರೂ ಕೋಪಿಸಿಕೊಳ್ಳುವುದಿಲ್ಲ. ತೀರ ಅವಾಂತರವಾಯಿತು ಅಂದರೆ ಒಂದಕ್ಕೊಂದು ಸ್ನೇಹದಿಂದಲೇ ಗುದ್ದು ಹಾಕುತ್ತವಷ್ಟೆ. ಬಾಲದಿಂದ ಸ್ವಲ್ಪ ಹಾಗನ್ನುತ್ತವೆ. ಅವು ಪರಸ್ಪರ ಕೈಕುಲುಕೋದೇ ಅಷ್ಟು ನಯವಾಗಿ. ಅವು ಜಗಳವಾಡಿ ಬಾಲ ಝುಳಪಿಸೋದಷ್ಟೇ ಅಲ್ಲ

ಒಮ್ಮೊಮ್ಮೆ ವಿಲಕ್ಷಣ ಭಂಗಿಯಲ್ಲಿ ನಿಲ್ಲುತ್ತವೆ. ಎದುರು ಬದುರಾಗಿ ಕೈ ಕೈ ಹಿಡಿದುಕೊಂಡು ಒಂದೊಂದೇ ಜೊತೆ ಕೈಗಳ ಮೇಲೆ ನಿಂತು ಮೈಯ್ಯನ್ನೆಲ್ಲ ಮೇಲಕ್ಕೆತ್ತಿ ಗಾಳಿಯಲ್ಲಿ ತಮ್ಮ ಕೊಂಡಿಗಳನ್ನು ಆಡಿಸಿ— ಹೆಣೆದು— ಬಿಡಿಸಿ




ಚೇಳುಗಳ ಪಿರಮಿಡ್

ನಿಲ್ಲುತ್ತವೆ. ಕಚಕುಳಿ ಮಾಡುತ್ತವೆ. ಇಂತಹ ಪಿರಮಿಡ್ಡು ಕಟ್ಟಿ ಇದ್ದ ಕ್ಕಿದ್ದಂತೆ ಎಲ್ಲ ಮೊದಲಿನಂತಾಗಿ, ಆತುರಾತುರವಾಗಿ ದಿಕ್ಕು ದಿಕ್ಕಿಗೆ ಓಡಿ ಬಿಡುತ್ತವೆ.

ಒಂದು ದಿನ ಫೇಬರ್ ಅವುಗಳನ್ನು ನೋಡಲು ಬಂದ. ಅವನು ಎಂದೂ ನೋಡದ ನೋಟ ಅವನಿಗಾಗಿ ಕಾದಿತ್ತು. ಒಂದು ಜೊತೆ ಚೇಳು ಗಳು ಕೈ ಕೈ ಹಿಡಿದುಕೊಂಡು ವಿಹರಿಸುತ್ತಿವೆ. ಅವು ದಂಪತಿಗಳು. ಹೆಣ್ಣು ದುಂಡುದುಂಡಗೆ ಕಂದು ಬಣ್ಣಕ್ಕಿತ್ತು. ಗಂಡು ತೆಳ್ಳಗೆ ಬಿಳಿಚಿಕೊಂಡಿತ್ತು. ಅವು ತಮ್ಮ ಬಾಲಗಳನ್ನು ಮುದ್ದಾಗಿ ಬಾಗಿಸಿಕೊಂಡು ತಾಳ ಬದ್ಧವಾಗಿ ಹೆಜ್ಜೆಯಿಡುತ್ತಾ ವಿಹಾರ ಮಾಡುತ್ತಿದ್ದುವು. ಹೆಂಡತಿ ಬಹಳ ವಿಧೇಯಳಾಗಿ ಗಂಡನನ್ನು ಹಿಂಬಾಲಿಸುತ್ತಾ ನರ್ತಿಸುತ್ತಿದ್ದಳು. ನಮ್ಮ ಊರಿನ ನವ ದಂಪತಿಗಳಂತೆಯೇ ಅವೂ ಓರೆಗಣ್ಣಿನಲ್ಲಿ ನೋಡಿ ನಸುನಗುತ್ತಿವೆ. ಕನಸು ಕಾಣುತ್ತಿವೆ. ಅಲ್ಲಿಯೇ ನಿಂತು ನಿಂತು ಸುಳಿಯುತ್ತಿವೆ.

ಗಂಡ ಆಗಾಗ ನಿಂತು ಪಕ್ಕಕ್ಕೆ ತಿರುಗಿ ತನ್ನ ಬಾಲದಿಂದ ತನ್ನಾಕೆಯ ಬೆನ್ನನ್ನು ನೇವರಿಸುತ್ತಾನೆ. ಪೂರ ಒಂದು ಗಂಟೆಯ ಕಾಲದ ವಿಹಾರವಾದ ಮೇಲೆ ಗಂಡು, ಯಾವುದೋ ಗುಹೆಯನ್ನು ಮೆಚ್ಚಿ ಅದರ ಬಳಿ ನಿಂತು ಹೆಂಡತಿಯ ಒಂದು ಕೈಯನ್ನು ಬಿಟ್ಟು ಮತ್ತೊಂದು ಕೈಯನ್ನು ಭದ್ರ ವಾಗಿ ಹಿಡಿದು ಗುಹೆಯ ಬಾಯಲ್ಲಿನ ಮರಳನ್ನು ತೋಡಲಾರಂಭಿಸಿತು. ಬಾಲದಿಂದ ಆ ಮರಳನ್ನು ದೂರ ತಳ್ಳಿತು. ಗುಹೆಯ ಬಾಯಿ ತೆರೆದು ಮನೆ ಸಿದ್ಧವಾಯಿತು. ಮೊದಲು ತಾನು ಒಳಹೊಕ್ಕು, ಸ್ವಲ್ಪ ಸ್ವಲ್ಪವಾಗಿ ಹೆಂಡತಿ ಯನ್ನು ಒಳಕ್ಕೆಳೆದುಕೊಂಡಿತು.

ದಂಪತಿಗಳ ಸಂಸಾರ ಆರಂಭವಾಯಿತು.

ಸಾಯಂಕಾಲ ಇಷ್ಟು ಸೊಗಸಾಗಿ ಪ್ರಾರಂಭವಾದ ಕಥೆಗೆ ರಾತ್ರಿಯೇ ಅತ್ಯಂತ ಘೋರವಾದ ಮುಕ್ತಾಯವೂ ಆಯಿತು. ನಮ್ಮ ಗೃಹಿಣಿ ಯೇನೋ ಸುಖವಾಗೇ ಇದ್ದಾಳೆ. ಅವಳ ಗಂಡನೂ ಅಲ್ಲೇ ಇದ್ದಾನೆ. ಆದರೆ ಕೊಲೆಯಾಗಿದ್ದಾನೆ. ಅವನ ಮೈಯಿನ ಸ್ವಲ್ಪ ಭಾಗ ಆಗಲೇ ತಿಂದು ಹೋಗಿದೆ. ತಲೆ ಮಾಯವಾಗಿದೆ. ಒಂದು ಕೈ ಎರಡು ಕಾಲುಗಳು ಮುಗಿದಿದೆ. ಫೇಬರ್ ಆ ಶವವನ್ನೆಳೆದು ಮನೆಯ ಹೊರಗೆ ಇಟ್ಟ. ಇಡೀ ದಿನ ಆ ಗೃಹಿಣಿ ಅದನ್ನು ಮುಟ್ಟಲೇ ಇಲ್ಲ. ಆದರೆ ರಾತ್ರಿ ಹೊರಗೆ ಬಂದಾಗ ದಾರಿಯಲ್ಲೇ ಬಿದ್ದಿದ್ದ ಶವವನ್ನು ಪುನಃ ಗುಹೆಗೆ, ಯೋಗ್ಯರೀತಿ ಯಲ್ಲಿ ಸಮಾಧಿ ಮಾಡಲು, ಎಳೆದುಕೊಂಡು ಹೋದಳು....

"ಅಂದರೆ ?" ವಸಂತಿ ಕೇಳಿದಳು.

"ಅಂದರೆ ತಿಂದು ಪೂರೈಸೋದು."

"ಆದರೆ ಈ ಹೆಣ್ಣು ಚೇಳು ರಣಚಂಡಿ ಹೆಂಡತಿಯಾದರೂ ಮಕ್ಕಳಲ್ಲಿ ತುಂಬಾ ವಾತ್ಸಲ್ಯ."

"ಊಂ, ಹುಲಿಮುದ್ದು ಅಂತಾರಲ್ಲ ಹಾಗೇ ಇರಬೇಕು" ಅಂದಳು ವಸಂತಿ.

"ಅಲ್ಲ. ಒಂದು ದಿನ ಫೇಬರ್ ನೋಡಿದಾಗ ತನ್ನ ಮಕ್ಕಳು ಮರಿಗಳನ್ನೆಲ್ಲ ಬೆನ್ನ ಮೇಲೇರಿಸಿಕೊಂಡು ಆಕೆ ಸುತ್ತಾಡುತ್ತಿದ್ದಳು. ಆದರೆ ಇನ್ನೂ ಕೆಲವರು ಮಕ್ಕಳು ಪಾರದರ್ಶಕವಾದ ಮೊಟ್ಟೆಗಳಲ್ಲೇ ಇದ್ದರು.

ಆ ಸಣ್ಣ ಜೀವಿಯಂತೂ ಅಕ್ಕಿಕಾಳಿನಷ್ಟೇ ಇದ್ದುದು. ಅದರ ಬಾಲ ಹೊಟ್ಟೆಯ ಮೇಲೆ ಮಡಿಸಿಕೊಂಡಿತ್ತು. ಎದೆಯ ಮೇಲೆ ಕೈಗಳು ಮಡಿಸಿಕೊಂಡಿದ್ದವು. ಪಕ್ಕಗಳ ಮೇಲೆ ಕಾಲುಗಳು ಮಡಿಸಿಕೊಂಡಿದ್ದುವು. ಯಾವುದೂ ಹೊರಕ್ಕೆ ಚಾಚಿಕೊಂಡಿರಲಿಲ್ಲ. ಅದರ ಮುಂಭಾಗದಲ್ಲಿ ಕಣ್ಣು ಇರಬಹುದಾದ ಸ್ಥಳದಲ್ಲಿ ಕಪ್ಪು ಚುಕ್ಕಿಗಳು ಕಾಣುತ್ತಿದ್ದುವು. ಆ ಪುಟ್ಟ ಜೀವಿ ಒಂದು ಹನಿ ದ್ರವದಲ್ಲಿ ತೇಲುತ್ತಿತ್ತು. ಇದಿಷ್ಟು ಇದ್ದುದು ಪಾರದರ್ಶಕವಾದ ಮೃದುವಾದ ಚರ್ಮದಲ್ಲಿ. ತಾಯಿ ಈ ಚರ್ಮವನ್ನು ಹರಿದು ಹಾಕಿ ಮರಿಯನ್ನು ತೆಗೆಯುತ್ತಿತ್ತು. ಉಳಿದ ಖಾಲಿ ಚರ್ಮವನ್ನು ತಿಂದು ಹಾಕುತ್ತಿತ್ತು. ಚೇಳು ಹೊಸದಾಗಿ ಹುಟ್ಟಿದ ಮರಿಗಳನ್ನು–ಬೆಕ್ಕು ಕುರಿಗಳ ಹಾಗೆ–ಸಾಧುವಾಗಿ ನೋಡಿಕೊಳ್ಳುತ್ತಿತ್ತು. ಮರಿಗಳೆಲ್ಲ ಶುಭ್ರವಾಗಿ ಹೊಸದಾಗಿ ಉತ್ಸಾಹದಿಂದಿದ್ದುವು. ಎಲ್ಲವೂ ಸ್ವಚ್ಛವಾದ ಮುಖ ಮೈಗಳಿಂದ ತಾಯಿಯ ಬೆನ್ನನ್ನು ಅವಳ ಕೈಗಳ ಮೂಲಕ ಏರುತ್ತಿದ್ದುವು. ಅವು ಸರಾಗವಾಗಿ ಹತ್ತಲಿ ಎಂದೇ ತಾಯಿ ತನ್ನ ಕೈಯನ್ನು ನೆಲದ ಮೇಲೆ ಚಾಚಿತ್ತು.

ಉರಿ ಬಿಸಿಲಿನ ಮಧ್ಯಾಹ್ನಗಳಲ್ಲಿ ಮರಿಗಳೊಡನೆ ಇರುವ ಚೇಳು, ತನ್ನ ಚಿಳ್ಳೆಪಿಳ್ಳೆಗಳೊಡನೆ ಸುತ್ತುವ ಕೋಳಿಯಷ್ಟೇ ಮುದ್ದಾಗಿ ಕಾಣುತ್ತದೆ. ಅರ್ಧ ಮುಕ್ಕಾಲರಷ್ಟು ಮರಿಗಳು ತಾಯ ಒತ್ತಿನಲ್ಲೇ ನೆಲದ ಮೇಲೆ ಓಡಾಡುತ್ತಿರುತ್ತವೆ. ಕೆಲವು ಅವಳ ಬಾಲವನ್ನೂ ಏರಿರುತ್ತವೆ. ಕೆಲವಂತೂ

ಅದರ ತುತ್ತ ತುದಿಯಲ್ಲಿ ಎಲ್ಲಕ್ಕಿಂತ ಎತ್ತರವಾದ ಸ್ಥಳದಲ್ಲಿ ಬಿಡಾರ ಹೂಡಿರುತ್ತವೆ. ಸುತ್ತಲಿನ ನೋಟ ನೋಡುವ ಆಸೆಯೋ ಏನೊ! ಕೆಲವು ದೊಂಬರಾಟದವರಂತೆ ಕೈಕಾಲೂರಿಕೊಂಡು ಬಾಲದ ಕೊಂಡಿಯ ಮೇಲೆ ಹತ್ತಿ ಮೊದಲಿನವರ ಸ್ಥಳವನ್ನು ಕಿತ್ತುಕೊಳ್ಳುತ್ತವೆ. ನೋಟ ಯಾರಿಗೆ ಬೇಡ!

ತಾಯಿಯ ಸುತ್ತ ಮಕ್ಕಳು ಮುತ್ತಿಕೊಂಡಿವೆ. ಕೆಲವು ಅವಳ ಕೆಳಗೂ ನುಸುಳಿಕೊಂಡಿವೆ. ಬಹಳ ಮರಿಗಳಿಗೆ ಅವಳ ಕಾಲುಗಳೇ ಬೇಕು. ವ್ಯಾಯಾಮ ಮಾಡುವುದಕ್ಕೆ ಅವು ಅನುಕೂಲ. ಉಯ್ಯಾಲೆಯಾಟಕ್ಕೆ ಸೊಗಸು. ಆಡಿ ಆಡಿ ಸುಸ್ತಾದ ಮೇಲೆ ಅವಳ ಬೆನ್ನನ್ನು ಏರಿ ತೆಪ್ಪಗಿದ್ದು ಬಿಡುತ್ತವೆ.

ಹೀಗೆಯೇ ಈ ನಿಜವಾದ ಕಥೆ ಮತ್ತೆ ಮತ್ತೆ ನಡೆಯುತ್ತದೆ."

# ಶ್ರೀಮತಿ ಕಣಜ

"ಅಬ್ಬಬ್ಬಾ ನನ್ನ ಕೆನ್ನೆ ಪಕ್ಕದಲ್ಲೇ ಹಾರೋಯ್ತು. ಕೆಂಪುದು. ಸಧ್ಯ ಕಚ್ಚಲಿಲ್ಲ. ಅಕ್ಕ, ಅದೆಂಥ ಹುಳು?"

"ಅದು ಕಣಜ. ಅವುಗಳ ಕಥೆ ಬಹಳ ಸೊಗಸು. ಅದು ನೆಲ ತೋಡಿ ಅಲ್ಲಿ ಗೂಡು ಮಾಡುತ್ತೆ. ಅದರ ವಿಷಯ ತುಂಬಾ ಸ್ವಾರಸ್ಯ."

"ಹ್ಞಾ ಹೇಳು ಮತ್ತೆ. ಇವತ್ತು ಅದರದೇ ಕಥೆ" ಆತುರ ಪಡಿಸಿದ ಸೀನು.

"ಅವುಗಳಲ್ಲಿ ಕಣಜದ ಹೆಂಡತಿ ನೆಲ ತೋಡುತ್ತದೆ. ಗಂಡು ಕಣಜ ಏನೂ ಮಾಡೋಲ್ಲ. ಉಂಡಾಡಿ ಗುಂಡ. ಬಹಳ ಚಪಲ ಅದಕ್ಕೆ. ನೋಡೋದಕ್ಕೂ ಸ್ವಲ್ಪ ಸಣಕಲು. ಅದಕ್ಕೆ ಬರೋದು ಎರಡೇ ಕೆಲಸ. ಹೆಂಡತಿಯ ಜೊತೆಗೆ ನರ್ತಿಸೋದು. ಇಲ್ಲದಿದ್ದರೆ ಎದುರಾಳಿಯ ಜೊತೆ ಯುದ್ಧ ಮಾಡಿ, ಅವನನ್ನು ನೆಲಕ್ಕೆ ಕೆಡವಿ ಮಣ್ಣು ಮುಕ್ಕಿಸಿ, ಹೆಂಡತಿಯ ಜೊತೆ ಭರ್‍ರಂತ ಹಾರಿಬಿಡೋದು. ಮದುವೆ ಆದಮೇಲೆ ಹೆಂಡತಿ ಮಾಡಿದ ಗೂಡಿನ ಸುತ್ತಾ ಝೇಂಕಾರ ಮಾಡುತ್ತಾ ಸುತ್ತುವುದು. ಅದನ್ನು ಒಳಕ್ಕೆ ಬಿಟ್ಟರೆತಾನೆ!

ಶ್ರೀಮತಿ ಕಣಜ ನೆಲ ಕೊರೆಯಲಾರಂಭಿಸುತ್ತದೆ. ಹೆಚ್ಚು ಕಡಿಮೆ ಅರ್ಧ ಗಜ ಆಳದವರೆಗೆ ತೋಡುತ್ತದೆ. ದಾರಿಯಲ್ಲಿ ಅಡ್ಡಿಯಾಗಿ ಬಂದ ಕಲ್ಲು ಮಣ್ಣುಗಳನ್ನೆಲ್ಲ ಬಾಯಲ್ಲೇ ಹೊರಕ್ಕೆ ಸಾಗಿಸುತ್ತದೆ. ಪಕ್ಕದ ಗೋಡೆಗಳನ್ನು ಕೆರೆದು ಅಲ್ಲಿನ ಧೂಳು ಮಣ್ಣನ್ನು ಕಾಲಿನಲ್ಲೇ ತಳ್ಳಿಕೊಂಡು ಹಿಂದುಮುಂದಾಗಿ ಹೊರಕ್ಕೆ ಬರುತ್ತದೆ.

ಇನ್ನು ಆಹಾರದ ಬೇಟೆಗೆ ಹೊರಡುತ್ತದೆ. ತಂದಿದ್ದನ್ನೆಲ್ಲ ಮಕ್ಕಳಿಗಾಗಿ ಗೂಡಿನಲ್ಲಿ ಶೇಖರಿಸುತ್ತದೆ. ತಾನು ಹೂವಿನ ಮಕರಂದವನ್ನು ಕುಡಿದು ಬದುಕಿದರೂ, ಮಕ್ಕಳಿಗೆ ಮಾಂಸ ಬೇಕು ಎನ್ನುವುದು ಅದಕ್ಕೆ ಗೊತ್ತು. ಆದ್ದರಿಂದ ತನಗೆ ಎರಡರಷ್ಟು ಭಾರವಾದ ದೊಡ್ಡ ಜೀರುಂಡೆಯನ್ನು ಹೊತ್ತು ತರುತ್ತದೆ.

"ತಾಳು, ತಾಳಕ್ಕ ಸ್ವಲ್ಪ. ಈಗ ಗಂಡು ಕಣಜ ಕೆಲಸಾನೇ ಮಾಡೋಲ್ಲ, ಅದನ್ನ ಗೂಡೊಳಕ್ಕೇ ಬಿಡೋಲ್ಲ ಅನ್ನೋದು ಫೇಬರ್‌ಗೆ ಹೇಗೆ ಗೊತ್ತು? ಅವನು ನೋಡಿದ ಯಾವುದೋ ಒಂದು ಗಂಡು ಕಣಜ ಹಾಗೆ ಕಾಲ ಕಳೆದಿರಬೇಕು. ಹೆಣ್ಣು ಕಣಜ ಮರಿಗಳಿಗೋಸ್ಕರಾನೇ ಜೀರುಂಡೆ ತಂದಿದೇ ಅಂತ ಹೇಗೆ ಗೊತ್ತು? ಗೂಡೊಳಗೇ ಕೂತುಕೊಂಡು ಗುಟ್ಟಾಗಿ ತಾನೇ ತಿಂದಿರಬಹುದು?" ಎಂದು ಬಾಲು ಜಗಳಕ್ಕೇ ಬಂದ.

ಶೀನು ಜೋರಾಗಿ ಚಪ್ಪಾಳೆ ತಟ್ಟುತ್ತಾ "ಹೌದು ಹೌದು, ಅದಕ್ಕೆ ಗಂಡನ್ನ ಅದು ಗೂಡೊಳಕ್ಕೇ ಬಿಟ್ಟಿಲ್ಲ" ಎಂದುಬಿಟ್ಟ.

"ಅಬ್ಬಬ್ಬಾ ಭಾಳ ದೊಡ್ಡ ಗಂಡಸರು ನೀವು! ಫೇಬರ್ ಕೂಡ ಗಂಡಸೇ. ಅವನು ಯಾಕೆ ಸುಳ್ಳು ಹೇಳುತ್ತಾನೆ?" ತಿರುಗಿಬಿದ್ದಳು ವಸಂತಿ.

"ಅಷ್ಟು ಸುಲಭ ಅಲ್ಲ. ಫೇಬರ್ ಇದನ್ನೆಲ್ಲ ಕಂಡುಹಿಡಿಯೋದಕ್ಕೆ ತನ್ನ ಜೀವನವನ್ನೇ ತೇಯ್ದಿದ್ದಾನೆ—ಹಗಲು, ರಾತ್ರಿ, ಚಳಿ, ಮಳೆ, ಬಿಸಿಲು ಎನ್ನದೆ ಅವುಗಳ ಜೊತೆ ಕಾಲ ಹಾಕಿದ್ದಾನೆ. ಈಗ ನೋಡಪ್ಪ ಕಣಜಗಳಲ್ಲಿ ಎಷ್ಟೋ ವಿಧ ಇದೆ. ಅಗೆಯುವ ಕಣಜಗಳಲ್ಲೇ ಎರಡು ಮೂರು ವಿಧ ಇದೆಯಂತೆ. ಇನ್ನೂ ಇರಬಹುದು. ಯಾರು ಬಲ್ಲರು? ಈಗ ನಿಮ್ಮನ್ನ ಇರುವೆಗಳಲ್ಲಿ ಎಷ್ಟು ವಿಧ ಇದೆ ಎಂದರೆ ನೀವು ನಾಲ್ಕೋ ಐದೋ ಹೆಸರು ಹೇಳ್ತೀರಿ. ಆದರೆ ಪ್ರಪಂಚದಲ್ಲಿರುವ ಇರುವೆಗಳನ್ನೆಲ್ಲ ಪರೀಕ್ಷೆ ಮಾಡಿ, ಇದುವರೆಗೆ ನಮಗೆ ತಿಳಿದ ಹಾಗೆ ಇರುವೆಗಳಲ್ಲಿ ಹದಿನೈದು ಸಾವಿರಕ್ಕೂ ಹೆಚ್ಚಿನ ವಿಧ ಇದೆ ಅಂತಾರೆ."

"ಅಬ್ಬಬ್ಬಾ ಹತ್ತಲ್ಲ, ನೂರಲ್ಲ, ಸಾವಿರವಲ್ಲ, ಹದಿನೈದು ಸಾವಿರ!" ಬೆರಗಾದಳು ವಸಂತಿ.

"ಆದ್ದರಿಂದ ತಾನು ಪರೀಕ್ಷೆ ಮಾಡುತ್ತಿರುವ ಜಾತಿಯ ಕಣಜವನ್ನು ಅವನು ನೋಡಿದ ತಕ್ಷಣ ಗುರುತಿಸಬೇಕು. ನಂತರ ಅದನ್ನು ಹಿಂಬಾಲಿಸಿ ಹೋಗಿ ಅದು ಹೋದ ರಸ್ತೆಯ ಪಕ್ಕದ ಇಳಿಜಾರಾದ ಸ್ಥಳವನ್ನು ಪರೀಕ್ಷೆ ಮಾಡಬೇಕು. ಅಲ್ಲಲ್ಲಿ ದಾರದಂತೆ ಏನೋ ಬಿದ್ದಿದೆ. ಅದು ಕಣಜಮ್ಮನವರು ಗುಡಿಸಿ ಹಾಕಿದ ಮಣ್ಣು. ದಾರದಂತೆ ಬಿದ್ದಿರುವ ಆ ಮಣ್ಣನ್ನೇ ಹಿಂಬಾಲಿಸಿಕೊಂಡು ಹೋದಾಗ ಯಾವುದೋ ಮಂಟಪದ ಪಕ್ಕದಲ್ಲೋ

ಮನೆಯ ಕೈಸಾಲೆಯ ಕೆಳಗೋ ಆ ಗೂಡಿನ ದ್ವಾರ ಕಾಣಿಸುತ್ತದೆ. ಮನೆಯ ದ್ವಾರಕ್ಕೆ ಮಳೆಯಿಂದ ರಕ್ಷಣೆ ಬೇಡವೇ? ಆದರೆ ಸಾಮಾನ್ಯವಾಗಿ ಕಣಜದ ಗೂಡಿನ ಬಾಯಿಯ ಮೇಲ್ಭಾಗಕ್ಕೆ ಇಂಥ ಯಾವುದಾದರೂ ಒಂದು ಮುಂದಕ್ಕೆ ಚಾಚಿಕೊಂಡ ಗೋಡೆ, ಅಥವಾ ಬಂಡೆ, ಅಥವಾ ಮನೆಯ ಮೇಲ್ಛಾವಣಿ ಇದ್ದೇ ಇರುತ್ತದೆ ಎನ್ನಬೇಕಾದರೆ ಆ ಫೇಬರ್ ಇನ್ನೆಷ್ಟು ಕಣಜದ ಗೂಡುಗಳನ್ನು ಹುಡುಕಿರಬೇಕು! ಮುಂದೆ ಅವನು ಕಣಜದ ಗೂಡನ್ನು ಅಗೆದು ನೋಡುತ್ತಾನೆ. ಅದು ಒಳಗಡೆ ಹೇಗಿದೆ ಅಂತ ತಿಳಿದು ಕೊಳ್ಳಬೇಕಲ್ಲ. ಆ ಮನೆ ಸಾಕಷ್ಟು ಅಗಲವಾಗಿದೆ. ಅಂದರೆ ಒಂದು ಹೆಬ್ಬೆಟ್ಟಿನ ಅಗಲ. ಆದರೆ ಬಹಳ ಉದ್ದವಾಗಿದೆ. ಒಂದಷ್ಟು ದೂರ ಆ ಒಡ್ಡನ್ನು ಕೆತ್ತಿಕೊಂಡು ಹೋದ ಮೇಲೆ ಕಣಜಮ್ಮ ಮಾಡಿದ ಆ ಇಕ್ಕಟ್ಟಿನ ಕಾಲುವೆ ಅನಿರೀಕ್ಷಿತ ದಿಕ್ಕುಗಳಿಗೆ ತಿರುಗಿರುತ್ತದೆ. ಒಂದು ಗೂಡು ಕೆದಕಿ ನೋಡಿದರೆ ಸಾಲದು. ಬಹುಶಃ ಅದೊಂದು ಗೂಡು ಮಾತ್ರ ಹಾಗೆ ವಿಚಿತ್ರವಾಗಿರ




ತೋಡುವ ಕಣಜ

ಬಹುದು. ಆದ್ದರಿಂದ ಫೇಬರ್ ನೂರಾರು ಗೂಡುಗಳನ್ನು ಪರೀಕ್ಷಿಸಿದ್ದಾನೆ. ಶ್ರೀಮಾನ್ ಕಣಜಪ್ಪನವರು ಯಾವ ಕೆಲಸವನ್ನೂ ಮಾಡೋದಿಲ್ಲ ಎನ್ನಬೇಕಾದರೆ, ಫೇಬರ್ ಎಷ್ಟು ದಿನ ಉರಿಬಿಸಿಲಿನಲ್ಲಿ, ಸಂಜೆಯಲ್ಲಿ, ಬೆಳಗಿನಲ್ಲಿ, ತಾಳ್ಮೆಯಿಂದ ಕಾದು ನೋಡಿರಬೇಕು. ಅದರಲ್ಲೂ ಯಾವುದೋ ಒಂದು ಕಣಜವನ್ನು ನೋಡಿದರಾಯಿತೆ? ಆ ಜಾತಿಯ ಕಣಜಗಳಲ್ಲಿ ಸಾಧ್ಯವಾದಷ್ಟು ಗಂಡು ಕಣಜಗಳನ್ನು ಸೂಕ್ಷ್ಮವಾಗಿ ಗಮನಿಸಬೇಡವೇ? ಫೇಬರ್ ಸರಿಯಾಗಿ ಪರೀಕ್ಷೆ ಮಾಡದೆ ಯಾವ ಮಾತನ್ನೂ ಆಡುವುದಿಲ್ಲ. ವಿಜ್ಞಾನಿಗಳೇ

ಹಾಗೆ. ಅಕಸ್ಮಾತ್ ಒಂದು ಗಂಡು ಕಣಜ ಕೆಲಸ ಮಾಡದಿರಬಹುದು! ಆದ್ದರಿಂದ ಆ ಜಾತಿಗೇ ಅನ್ವಯಿಸುವಂತೆ ಅದರ ಗುಣವನ್ನು ನಿಶ್ಕರ್ಷಿಸುವುದು ಅಷ್ಟೇನೂ ಸರಿಯಾದ ಕೆಲಸವಲ್ಲ. ನೀವೇ ಊಹಿಸಿ ಇಂಥಹ ಕಥೆಗಳಿಗಾಗಿ ಗಂಟೆಗಟ್ಟಲೆ ಉರಿಯುವ ಬಿಸಿಲಿನಲ್ಲಿ ಸದ್ದು ಮಾಡದೆ ಎಷ್ಟು ಸಹನೆಯಿಂದ ಕಾದಿರಬೇಕು ಅವನು!

ಆದರೆ ಕಣಜಗಳು ಹಾರಿ ಬಿಡುತ್ತವೆ....ಫೇಬರ್ ಅವುಗಳ ಹಿಂದೆ ಓಡುತ್ತಾನೆ. ಅವು ರಸ್ತೆಯ ಮೇಲೆ ಖಂಡಿತ ಹಾರೋದಿಲ್ಲ. ಮರಗಳ ಅಡಿಯಲ್ಲಿ, ಕೊಂಬೆಗಳಲ್ಲಿ ತೂರಿಕೊಂಡು, ಪೊದೆಗಳನ್ನು ನುಗ್ಗಿ, ಕೊಳಗಳ ಮೇಲೆ, ಮರಳಿನ ಮೇಲೆ ಹಾರಿ, ಬಂಡೆಗಳನ್ನು ದಾಟಕೊಂಡು ಓಡುತ್ತವೆ. ಅವು ಎದುರಾಳಿಗಳನ್ನು ಕಂಡು ಹೋರಾಡುವುದನ್ನು ನೋಡಬೇಕಾದರೆ ಎಂತಹ ಜಾಗಕ್ಕೂ ಅವನ್ನು ಹಿಂಬಾಲಿಸಬೇಕು. ನೀವು ನೋಡಿದ್ದೀರಾ ಅವುಗಳ ಕಾಳಗವನ್ನು. ನಾನಂತೂ ನೋಡಿಲ್ಲಪ್ಪ.

ಆಮೇಲೆ ಫೇಬರ್ ಶ್ರೀಮತಿ ಕಣಜ ಗೂಡನ್ನು ಹೇಗೆ ತೋಡುತ್ತದೆ ಎಂದು ನೋಡಲು ಕುಳಿತುಕೊಳ್ಳುತ್ತಾನೆ. ದೊಡ್ಡ ಮರದ ಪೆಟ್ಟಿಗೆಯಲ್ಲಿ ಇಳಿಜಾರಾಗಿ ಮಣ್ಣು ಕಲ್ಲು ತುಂಬಿ ಗಟ್ಟಿಸಿಕೊಟ್ಟು ನೋಡುತ್ತಾನೆ. ಆದರೆ ಕಣಜಮ್ಮನವರಿಗೆ ಅದು ಸೊಗಸೀತೇ? ಅದರ ಮನಸ್ಸಿಗೆ ಒಪ್ಪುವಂತೆ ಪುನಃ ಪುನಃ ಮಾಡುತ್ತಾನೆ....ಎಲ್ಲ ಮೈ ಮುರಿಯುವ ಕೆಲಸ.

ಇಷ್ಟೆಲ್ಲ ಅಗೆಯೋದು ಯಾಕಿರಬಹುದು! ಅದು ಮನೆಯೊಳಗೆ ಏನೋ ಜೋಪಾನ ಮಾಡಿರಬೇಕು. ಆ ಮನೆಯ ಇನ್ನೊಂದು ಮೂಲೆಗಿರುವ ಒಳಗಿನ ಕೋಣೆಯನ್ನು ಕೆದಕಿ ನೋಡಿದ ಫೇಬರ್. ಆಹಾ ಸಿಕ್ಕಿತು. ಐದು ದೊಡ್ಡ ದೊಡ್ಡ ಜೀರುಂಡೆಗಳು. ಎಲ್ಲ ಸತ್ತಿವೆ. ಸತ್ತಿವೆಯೇ? ನಿಜವಾಗಿ? ಆದರೆ ಅವುಗಳ ಬಣ್ಣ ಸ್ವಲ್ಪವೂ ಮಾಸಿಲ್ಲ. ಎಷ್ಟು ಹೊಸದಾಗಿ ಕಾಣುತ್ತಿವೆ! ಅವುಗಳ ಕಾಲುಗಳು ಬಿಗಿದುಕೊಂಡಿಲ್ಲ. ಯಾವುದರಿಂದಾದರೂ ಕೆಣಕಿದರೆ ಸ್ವಲ್ಪ ಕಾಲುಗಳನ್ನು ಅಲುಗಿಸುತ್ತವೆ. ಸತ್ತರೆ ಹೀಗೂ ಮಾಡುವುದುಂಟೇ? ತಮ್ಮ ಪಾಡಿಗೆ ಬಿಟ್ಟರೆ ಸ್ವಲ್ಪವೂ ಅಲುಗದೇ ಬಿದ್ದಿವೆ! ಇದೇನು ವಿಚಿತ್ರ! ಜೀವ ಇರುವ ಪ್ರಾಣಿಯ ಲಕ್ಷಣವೇ ಇದು?

ಫೇಬರ್ ಆ ಬಿಲಗಳನ್ನು ನೋಡುತ್ತಾ ಕುಳಿತಾಗ ಎಷ್ಟೋ ಬಾರಿ ಕಣಜಮ್ಮ ತನಗಿಂತ ಎರಡರಷ್ಟು ದೊಡ್ಡದಾದ ಜೀರುಂಡೆಯನ್ನು ತನ್ನ ಕೈಗಳಿಂದಲೇ ಹೊತ್ತು ತರುವುದನ್ನು ನೋಡಿದ್ದ. ಅದು ಮನೆಗೆ ಬರುವ ರೀತಿಯೇ ಒಂದು ವಿಚಿತ್ರ. ಒಂದಷ್ಟು ದೂರ ಹಾರಿಕೊಂಡು ಬಂದು ಆಮೇಲೆ ಮಿಕ್ಕ ದಾರಿಯನ್ನು ನಡೆಯುತ್ತಿತ್ತು. ಫೇಬರಿಗೆ ಯೋಚನೆ ಹತ್ತಿತು. ಆ ಜೀರುಂಡೆಗಳು ಸತ್ತಿರಲಾರವು. ಎಂಥ ದೊಡ್ಡ ಕೀಟ ವಿಜ್ಞಾನಿಗಳು ಹೇಳಿದರೇನಂತೆ, ಈ ಕಣಜಗಳ ಕಡಿತದಿಂದ ಅವಕ್ಕೆ ವಿಷ ಏರಿರಲಾರದು. ಒಂದು ವೇಳೆ ಹಾಗಿದ್ದರೆ ಇವು ಕೊಳೆತುಹೋಗಿರುತ್ತಿದ್ದುವು. ಸಾಲದ್ದಕ್ಕೆ ಈ ಜೀರುಂಡೆ ಮಹಾ ಗಟ್ಟಿಗ ಜೀವಿ. ಕೆಲವರು ಇವುಗಳನ್ನೆಲ್ಲ ಸಂಗ್ರಹಿಸಿರುತ್ತಾರೆ. ಎಷ್ಟು ವಿಧ ಇವೆ, ಹೇಗಿವೆ ಎಂದು ನೋಡುವುದಕ್ಕೆ, ಇವುಗಳನ್ನೆಲ್ಲ ಸಾಲಾಗಿ ದಪ್ಪ ರಟ್ಟಿನ ಮೇಲೆ ಬೆನ್ನಿಗೆ ಸೂಜಿ ಚುಚ್ಚಿ ಇಟ್ಟಿರುತ್ತಾರೆ.

"ಅಯ್ಯೋ ಎಂಥ ಕ್ರೂರಿಗಳಪ್ಪ" ಎಂದಳು ವಸಂತಿ.

"ಹೌದಮ್ಮ, ಹಾಗೆಲ್ಲ ಮಾಡದೆ ವಿಧಿಯೇ ಇಲ್ಲ. ಇಲ್ಲದಿದ್ದರೆ ಅವುಗಳ ವಿಷಯ ತಿಳುಕೊಳ್ಳೋದು ಹೇಗೆ....ಹಾಗೆ ಬೆನ್ನಿನಿಂದ ಹೊಟ್ಟೆಯ ಮೂಲಕ ಗುಂಡುಸೂಜಿ ಚುಚ್ಚಿಟ್ಟಿದ್ದರೂ ಅವು ಒಂದು ತಿಂಗಳು ಬದುಕಿರುತ್ತವೆ."

"ಅಬ್ಬಬ್ಬ ಗಟ್ಟಿಗರೇ ನಿಜವಾಗಿ" ಅಂದ ಬಾಲು.

"ಆದರೆ ಒಂದು ತಿಂಗಳು ಪೂರ....ಅಂದರೆ ಬದುಕಿರುವಷ್ಟು ದಿನವೂ ಕಾಲು ಬಡಿಯುತ್ತಲೇ ಇರುತ್ತವೆ. ಇಲ್ಲಿ ಬದುಕಿದ್ದರೂ ಅಲ್ಲಾಡದೆ ಬಿದ್ದಿವೆಯಲ್ಲ ಯಾಕೆ?"

ಕಣಜಮ್ಮ ಆ ಜೀರುಂಡೆಯನ್ನು ಹೇಗೆ ಹಿಡಿಯುತ್ತದೆ, ಏನು ಮಾಡಿ ಅದನ್ನು ತೆಪ್ಪಗಿರಿಸುತ್ತದೆ ನೋಡಬೇಕು ಎಂದು ಕೊಂಡ ಫೇಬರ್. ಸರಿ ಯಥಾಪ್ರಕಾರ ಅದರ ಹಿಂದೆ ಹೊರಟ. ಓಡಿದ. ಆಕೆ ಹೊರಟಳು. ಇಲ್ಲಿ ಸುಳಿದಳು, ಅಲ್ಲಿ ಹಾರಿದಳು, ಎಲ್ಲೆಲ್ಲೂ ಸುತ್ತಿದಳು. ಕೊನೆಗೆ ನಯವಾಗಿ ಝೇಂಕರಿಸುತ್ತಾ ಗಾಳಿಯಲ್ಲಿ ತೂರಿ ಮಾಯವಾದಳು. ಕಣ್ಣಿಗೇ ಕಾಣಿಸುವುದು ಕಷ್ಟ ಎಂದ ಮೇಲೆ ಹಿಂದೆ ಓಡಾಡುವುದು ಸಾಧ್ಯವೇ? ಆದ್ದರಿಂದ

ಫೇಬರ್ ಇದರ ಬದಲು ಆ ಜೀರುಂಡೆಯನ್ನೇ ಹಿಡಿಯೋಣ ಎಂದುಕೊಂಡ. ಏಕೆಂದರೆ ಆ ಜೀರುಂಡೆ ನಡೆಯುತ್ತದೆ. ಆದರೆ ಅವು ಎಲ್ಲಿರುತ್ತವೆ? ಕಣಜಮ್ಮ ಅಲ್ಲಿ ಇಲ್ಲಿ ಹುಡುಕಿದ ಹಾಗೆ ಮಾಡಿ ಅವನ್ನು ಹತ್ತು ನಿಮಿಷದಲ್ಲಿ ತಂದುಬಿಡುತ್ತಾಳೆ. ಫೇಬರ್ ನಾಲ್ಕು ದಿನ ಅಲೆದು ಮೂರು ಜೀರುಂಡೆಗಳನ್ನು ಸಂಪಾದಿಸಿದ. ಅವಳು ತಂದ ಜೀರುಂಡೆಗಳು ಸೊಗಸಾಗಿದ್ದುವು, ಬಣ್ಣವಾಗಿ ಮಿರಿಮಿರಿ ಮಿಂಚುತ್ತಿದ್ದುವು. ಎಲ್ಲೂ ಒಂದು ಸಣ್ಣ ಗಾಯ ಕೂಡ ಆಗಿರಲಿಲ್ಲ. ಆದರೆ ಫೇಬರ್ ತಂದವು ಧೂಳಾಗಿ ವಯಸ್ಸಾದಂತೆ ಕಾಣುತ್ತಿದ್ದುವು. ಆದರೆ ಬದುಕಿದ್ದುವು. ಅವಳು ಠಾಕುಠೀಕಾಗೇ ಇದ್ದಳು. ಆದರೆ ಫೇಬರ್ ಬಳಲಿ ಬೆಂಡಾಗಿದ್ದ. ಅವಳು ಜೀರುಂಡೆ ಹಿಡಿಯುವ ಈ ಸಾಮರ್ಥ್ಯಕ್ಕೆ ನಾವು ಖಂಡಿತ ತಲೆ ಬಾಗಲೇ ಬೇಕು, ಎನ್ನುತ್ತಾನೆ ಫೇಬರ್. ಫೇಬರ್ ತನ್ನ ಆ ಕೊಳಕು ಜೀರುಂಡೆಯನ್ನು ಕಣಜಮ್ಮನ ಗೂಡಿನ ಹತ್ತಿರ ಓಡಾಡಲು ಬಿಟ್ಟ. ಕಣಜಮ್ಮ ಗೂಡಿನಿಂದ ಹೊರಗೆ ಬಂದಳು. ಬೇಟೆ ಅಲ್ಲೇ ಇತ್ತು. ಅದನ್ನು ನೋಡಿಯೂ ನೋಡದಂತೆ ತನ್ನ ಬೇಟೆಗಾಗಿ ಹೊರಟುಬಿಟ್ಟಳು.

ಸಣ್ಣ ಮಕ್ಕಳಂತೆ ಪೆಚ್ಚುಬಿದ್ದ ಫೇಬರ್. ಆದರೆ ಅವನೇನು ಕಡಿಮೆ ಬುದ್ಧಿವಂತನೇ? ಅವನೂ ಯೋಚನೆ ಮಾಡಿಯೇ ಮಾಡಿದ. ಕೆಲವು ಸಮಯದಲ್ಲಿ ಮನುಷ್ಯರೇ ಒಳ್ಳೆಯ ವಸ್ತು ಸಿಗದಿದ್ದರೆ ಸ್ವಲ್ಪ ಕೆಟ್ಟದ್ದನ್ನೇ ತೆಗೆದುಕೊಂಡು ಹೋಗುತ್ತಾರಂತೆ – ಅಂದರೆ ಶ್ರೀನಿವಾಸನ ಹಾಗೆ ಸ್ಕೂಲಿಗೆ ಹೊತ್ತಾದಾಗ ಹೊಸ ಚೀಲ ಸಿಗದಿದ್ದರೂ ಹಳೆಯದನ್ನೇ ತಗೊಂಡು ಹೋಗೊಲ್ಲವೇ, ಬಣ್ಣ ಹೋಗಿದ್ದರೂ ಪರವಾಗಿಲ್ಲ ಅಂತ? ಹಾಗೆ ಒಂದು ದಿನ ಕಣಜಮ್ಮ ಸೊಗಸಾದ ಹೊಸ ಜೀರುಂಡೆ ತಂದಾಗ, ಫೇಬರ್ ಅದನ್ನು ತನ್ನ ಇಕ್ಕಳದಿಂದ ಎಳೆದು ಕಿತ್ತುಕೊಂಡು ಬಿಟ್ಟ. ಅಮ್ಮಾವರು ರೇಗಾಡಿದರು. ಹೊಡೆಯುವುದಕ್ಕೇ ಬಂದರು. ಕೊನೆಗೆ ಏನೂ ತೋಚದೆ ಆ ಕೊಳಕು ಜೀರುಂಡೆಯನ್ನೇ ತೆಗೆದುಕೊಳ್ಳಲು ಹೋದರು. ಆದರೆ ಆ ಜೀರುಂಡೆ ಓಡಾಡುತ್ತಿದೆ! ನಾನು ಆಗಲೇ ಕೊಂದಿದ್ದೆನಲ್ಲ, ಇದೇಕೆ ಅಲುಗಾಡುತ್ತಿದೆ ಎಂದುಕೊಂಡು, ಬಿಟ್ಟು ಹೋಗದೆ, ಆ ಜೀರುಂಡೆಯ ಹತ್ತಿರ ಹೋಗಿ ಅದರ ಬೆನ್ನನ್ನು ಅಮುಕಿತು. ಅದರಲ್ಲಿನ ಒಂದು ಕೀಲು ಬಾಯಿಬಿಟ್ಟುಕೊಳ್ಳುವ

ವರೆಗೂ ಅದುಮಿ ಅಲ್ಲಿಗೆ ಸರಿಯಾಗಿ ತನ್ನ ಕೊಂಡಿಯಿಂದ ಹಲವಾರು ಬಾರಿ ಇರಿಯಿತು. ಆ ಕ್ಷಣವೇ ಜೀರುಂಡೆ ತೆಪ್ಪಗಾಯಿತು. ಇನ್ನು ಆ ಜೀರುಂಡೆ ತಿಂಗಳುಗಟ್ಟಲೆ ಅಥವಾ ಸಾಯುವವರೆಗೂ ಸ್ವಲ್ಪವೂ ಬಣ್ಣಗೆಡದೆ ತೆಪ್ಪಗೇ ಬಿದ್ದಿರುತ್ತದೆ. ಫೇಬರ್ ಆ ಚಾಣಾಕ್ಷ ಘಾತಕಿಯಿಂದ ಆ ಜೀರುಂಡೆಯನ್ನು ತೆಗೆದುಕೊಂಡು ಬದುಕಿರುವ ಇನ್ನೊಂದು ಜೀರುಂಡೆಯನ್ನು ಕೊಟ್ಟ. ಹಾಗೆಯೇ ಮಾಡುತ್ತ ಕೊನೆಗೆ ಅವನ ಹತ್ತಿರ ಅಲ್ಲಾಡದೆ ಬಿದ್ದಿರುವ ಮೂರು ಜೀರುಂಡೆಗಳಾದವು. ಇನ್ನು ಅವುಗಳನ್ನು ಪರೀಕ್ಷೆ ಮಾಡಬೇಕು. ಯಾವ ಜಾಗದಲ್ಲಿ ಇರಿಯಿತು ಎನ್ನುವುದು ಗೊತ್ತು. ಆದರೆ ಅಲ್ಲಿ ಯಾವ ಗಾಯವೂ ಕಾಣೆ. ಅವನಿಗೆ ತಿಳಿದ ಯಾವ ವಿಷವೂ ಇಂಥಹ ಪರಿಣಾಮ ಕೊಡಲಾರದು. ಆದ್ದರಿಂದ ಶ್ರೀಮತಿ ಕಣಜಕ್ಕೆ ಅಂಗರಚನಾ ಶಾಸ್ತ್ರ ತನಗಿಂತಲೂ ಚೆನ್ನಾಗಿ ಗೊತ್ತು ಎಂದು ತೀರ್ಮಾನಿಸಿಕೊಂಡ. ಜೀರುಂಡೆಯ ನರವ್ಯೂಹದ ಪರಿಚಯ ಈ ಕಣಜಮ್ಮನಿಗೆ ಚೆನ್ನಾಗಿಯೇ ಇರಬೇಕು.

ಫೇಬರ್ ಪುಸ್ತಕಗಳನ್ನು ಹುಡುಕಿದ. ಸೂಕ್ಷ್ಮದರ್ಶಕದ ಹತ್ತಿರ ಹೋದ. ಎಷ್ಟೋ ಜೀರುಂಡೆಗಳಿಗೆ ನರವ್ಯೂಹಗಳಲ್ಲಿ ಮೂರು ಕೇಂದ್ರಗಳಿವೆ. ಅವುಗಳಲ್ಲಿ ಮೂರನ್ನೂ ನಾಶಮಾಡಿದರೆ ಮಾತ್ರ ಜೀರುಂಡೆಗಳು ಕೈಕಾಲಾಡಿಸಿದೆ ಬೀಳುವುದು. ಆದರೆ ಕಣಜಮ್ಮ ಹುಡುಕಿದ ಈ ವಿಧದ ಜೀರುಂಡೆಗಳಿಗೆ ಮಾತ್ರ ನರಗಳ ಕೇಂದ್ರ ಒಂದೇ ಒಂದು. ಈ ಕೇಂದ್ರದ ಕ್ರಿಯೆ ನಿಲ್ಲಿಸಿಬಿಟ್ಟರೆ ಜೀರುಂಡೆಗೆ ಪಾರ್ಶ್ವವಾಯು ಬಂದುಬಿಡುತ್ತದೆ. ಆದರೆ ಅದು ಬದುಕಿರುತ್ತದೆ. ಇದು ಕಣಜಮ್ಮನ ಚಾತುರ್ಯ.

ಫೇಬರ್ ಆಲೋಚನೆ ಮಾಡಿದ್ದು ಸರಿಯೋ ಅಲ್ಲವೋ ಅಂತ ನಿಮಗೆ ಸಂದೇಹವಾದರೆ, ಅವನು ಮಾಡಿದ ಪ್ರಯೋಗ ಕೇಳಿ. ಫೇಬರ್ ಕಣಜಮ್ಮನ ಉಪಾಯವನ್ನು ತಾನೂ ಕಲಿತ. ಅದೇ ರೀತಿಯಲ್ಲಿ ನರಗಳ ಕೇಂದ್ರವನ್ನು ಇರಿದ. ಜೀರುಂಡೆ ಈ ಸಲವೂ ತೆಪ್ಪಗಾಯಿತು. ಅಲ್ಲಿಗೆ ಮನುಷ್ಯ ಮಾಡಿದರೂ ಆ ಉಪಾಯ ಫಲಿಸುತ್ತದೆ ಎಂದ ಹಾಗಾಯಿತು. ಆದರೆ ಅಯ್ಯೋ ಆ ಕೆಲಸವನ್ನು ಕಣಜಮ್ಮನಷ್ಟು ಚೆನ್ನಾಗಿ ಮಾಡಲಾಗುತ್ತದೆಯೆ? ಫೇಬರ್ ಘಾಸಿ ಮಾಡಿದ ಜೀರುಂಡೆ ಸ್ವಲ್ಪ ಹೊತ್ತಿಗೆ ಸತ್ತೇ ಹೋಯಿತು.

ಕಣಜ ಅಲುಗಾಡದೆ ಬಿದ್ದ ಜೀರುಂಡೆಯ ಮೇಲೆ ಮೊಟ್ಟೆಗಳನ್ನಿಡುತ್ತದೆ. ಆ ಸಣ್ಣ ಹೊಸ ಜೀವಿಗಳು, ಮೊಟ್ಟೆಯಿಂದ ಎಚ್ಚೆತ್ತ ಮೇಲೆ, ಕುಳಿತ ಜಾಗದಲ್ಲೇ ಸಿಗುವ ಆ ಹೊಸ ರಸವತ್ತಾಗಿರುವ ಮಾಂಸವನ್ನು ತಿನ್ನಲಾರಂಭಿಸುತ್ತವೆ. ಕಾಲನ್ನೇ ಅಲುಗಿಸಲಾರದ ಆ ಜೀರುಂಡೆಗಳು ಕೊರೆಯುವ ಈ ಹುಳುಗಳನ್ನು ನಿವಾರಿಸುವುದು ಹೇಗೆ ? ಆ ಕಣಜದ ಮರಿಗಳು ಜೀರುಂಡೆಯನ್ನು ಅದರ ಹೊರಹೊದಿಕೆಯವರೆಗೂ ಬಿಡದೆ ತಿನ್ನುತ್ತವೆ. ಆ ವೇಳೆಗೆ ಮರಿಗಳು ಸ್ವಲ್ಪ ಬೆಳೆದು ಹತ್ತಿರದಲ್ಲೇ ಬಿದ್ದಿರುವ ಇನ್ನೊಂದು ರುಚಿಯಾದ ಜೀರುಂಡೆಗೆ ಸರಿದು ಬಾಯಿಡುತ್ತವೆ."

"ಅಯ್ಯೋ ಪಾಪ, ಎಷ್ಟು ಅನ್ಯಾಯ !" ಎಂದ ಸೀನು.

# ಬೂವಾಡಿಯ ಗುಟ್ಟು

"ಇವತ್ತು ನಿಮಗೆ ಬೂವಾಡಿಯ ಕಥೆ ಹೇಳೋಣ. ಬೂವಾಡಿಗೆ ಸಗಣಿ ದುಂಬಿ, ತೊಪ್ಪೆಹುಳ ಅಂತೆಲ್ಲ ಬೇರೆ ಬೇರೆ ಹೆಸರುಗಳೂ ಉಂಟು. ಅವು ನೋಡುವುದಕ್ಕೆ ಚೆನ್ನಾಗಿರುತ್ತವೆ. ಅವುಗಳ ವೇಷ ತೀರ ಸರಳ ವಾದರೂ ಥಳಥಳ ಹೊಳೆಯುತ್ತಿರುತ್ತವೆ. ಅವು ತಲೆಗೆ ಚಿತ್ರವಿಚಿತ್ರ ಅಲಂಕಾರ ಮಾಡಿಕೊಂಡಿರುತ್ತವೆ. ಶೀತ ದೇಶಗಳಲ್ಲಿ ಕಪ್ಪು ಬೂವಾಡಿ ಗಳೇ ಸಾಮಾನ್ಯ. ಆದರೆ ಉಷ್ಣ ಪ್ರದೇಶಗಳಲ್ಲಿ ಮಿರುಮಿರುಗುವ ಬಂಗಾರದ ಬಣ್ಣ, ಕೆಂಪು ಮಿಶ್ರ ತಾಮ್ರ ವರ್ಣಗಳಲ್ಲಿ, ಇರುತ್ತವೆ. ಇಷ್ಟೆಲ್ಲ ಬಣ್ಣ ಬಣ್ಣದ ವೇಷಭೂಷಣ ಯಾಕೆ ಅಂತೀರಿ? ಕಸಗುಡಿಸಿ ಗುಡ್ಡೆ ಹಾಕಿಕೊಳ್ಳೋದಕ್ಕೆ! ಹಸು, ಎಮ್ಮೆ, ಕುದುರೆ, ಕತ್ತೆ, ಕುರಿ ಮುಂತಾದು ವೆಲ್ಲ ಎಲ್ಲೆಲ್ಲೋ ನೋಡುತ್ತಾ ನೆಲದ ಮೇಲೆ ತೊಪ್ಪೆ ಹಾಕಿ ಹೋಗುತ್ತ ವಲ್ಲ, ಆಗ ಇವು ಹಿಂಡುಹಿಂಡಾಗಿ ಅಲ್ಲಿಗೆ ನುಗ್ಗಿ, ಆ ಕಸವನ್ನೆಲ್ಲ ತಮ್ಮ ನೆಲ ಮಾಳಿಗೆಗೆ ಸಾಗಿಸುತ್ತವೆ. ಹೀಗೆ ಇವು ಪರೋಪಕಾರ ಮಾಡುವುದರಿಂದಲೇ ಇವಕ್ಕೆ 'ದೇವಕೀಟ' ಎಂಬ ಹೆಸರೂ ಬಂದಿದೆ. ಸಗಣಿಯ ವಾಸನೆ ಮೂಗಿಗೆ ಬಂದಿದ್ದೇ ತಡ ಹಿಂಡು ಹಿಂಡಾಗಿ ಆ ಸ್ಥಳದಲ್ಲಿ ಪ್ರತ್ಯಕ್ಷವಾಗು ತ್ತವೆ. ಕೆಲವು ಅದರ ಮೇಲ್ಭಾಗವನ್ನು ಕೆರೆದುಕೊಳ್ಳುತ್ತವೆ. ಕೆಲವು ಅದರ ಮಧ್ಯದಲ್ಲಿರುವ ರುಚಿರುಚಿಯಾದ ಭಾಗಕ್ಕೆ ದಾರಿಮಾಡಿಕೊಳ್ಳು ತ್ತವೆ. ಕೆಲವು ಸುಮ್ಮನೆ ಕೈಗೆ ಸಿಕ್ಕಿದ್ದನ್ನು ಸಾಗಿಸುತ್ತವೆ. ಇನ್ನು ಕೆಲವಕ್ಕೆ ಆತುರ. ಅಲ್ಲೇ ಊಟಕ್ಕೆ ಕುಳಿತು ಬಿಡುತ್ತವೆ. ಆದರೆ ಮುಕ್ಕಾಲು ಪಾಲು ಜೀರುಂಡೆಗಳು ಆ ರಾಶಿಯನ್ನು ಸಾಧ್ಯವಾದಷ್ಟು ತಮ್ಮ ಮನೆಗಳಿಗೆ ಸಾಗಿಸಿ ಜೋಪಾನಮಾಡುತ್ತವೆ. ಎಷ್ಟು ದಿನ ಸಾಧ್ಯವೋ ಅಷ್ಟು ದಿನ ಇಟ್ಟು ಕೊಂಡು ತಿನ್ನಬಹುದು ನೋಡಿ. ಅದರಲ್ಲೂ ಫೇಬರನ ಊರಿನಲ್ಲಿ, ಬರಿಯ ಓಮದ ಗಿಡ ಇರುವ ಕಲ್ಲು ಬಂಡೆಗಳಿಂದ ತುಂಬಿದ ಮೈದಾನದಲ್ಲಿ, ಹೊಸ ಹೊಸ ಸಗಣಿ ದೇವರ ದಯದಿಂದಲೇ ಸಿಗಬೇಕು!

ಹಾಗೆ ಫೇಬರ್ ನೋಡುತ್ತಾ ನಿಂತಿದ್ದಾಗ . . . ಯಾರಿದು ? . . .

ಆ ಗುಡ್ಡೆಯ ಮೇಲಕ್ಕೇ ಅವಸರಅವಸರವಾಗಿ ಓಡುತ್ತಿದ್ದಾರೆ! . . . . ಬಂದಿದ್ದು ತಡವಾಯಿತೋ ಏನೋ? ಧಾಪುಗಾಲು ಹಾಕಿಕೊಂಡು ಓಡುತ್ತಿದ್ದಾರೆ. ಮುಂದಿನ ಸ್ಪರ್ಶಾಂಗಗಳು ಬೀಸಣಿಗೆಯಂತೆ ಆಡುತ್ತಿವೆ. ದುರಾಸೆಯೋ, ಆತುರವೋ ಕಾಣೆ . . . ಇನ್ಯಾರೂ ಅಲ್ಲ. ಅದು ನಮ್ಮ ಬೂವಾಡಿ ಮಹಾಶಯರು. ಫೇಬರ್ ನೋಡಿದ ಕಪ್ಪು ಬಣ್ಣದ ಆ ದುಂಬಿ ಸಗಣಿ ದುಂಬಿಗಳಲ್ಲೆಲ್ಲ ಅತಿ ದೊಡ್ಡದು. ಅದರ ತಲೆಗೆ ಸ್ವಲ್ಪ ದೊಡ್ಡದಾದ ಚಪ್ಪಟೆಯಾದ ಅಂಚಿದೆ. ಅದು ತ್ರಿಕೋನಾಕಾರಗಳಿಂದ ಕೂಡಿದ ಕಮಾನಿನಿಂದ



ಬೂವಾಡಿ

ಸಜ್ಜಿತವಾಗಿದೆ. ಗರಗಸದ ಹಲ್ಲುಗಳು ಕಮಾನಾಗಿದ್ದರೆ ಹೇಗೋ ಹಾಗೆ. ಅಗೆಯುವುದಕ್ಕೆ ಕತ್ತರಿಸುವುದಕ್ಕೆ ಎಲ್ಲಕ್ಕೂ ಅದೇ ಆಯುಧ. ತನಗೆ ಬೇಕಾದ ತರಕಾರಿಗಳನ್ನು ಬಾಚಿಕೊಳ್ಳುವುದೂ ಅದರಿಂದಲೇ. ಬೇಡವಾದಾಗ ದೂರತಳ್ಳುವುದೂ ಅದರಿಂದಲೇ. ಎಂಥದನ್ನು ಆರಿಸಬೇಕು ಎಂಬುದು ಆ ದುಂಬಿಗಳಿಗೆ ಚೆನ್ನಾಗಿ ಗೊತ್ತು. ತಮಗೆ ಆಹಾರ ಬೇಕಾದಾಗ ಅವು

ಅಷ್ಟು ಎಚ್ಚರ ವಹಿಸದಿದ್ದರೂ ತಮ್ಮ ಮಕ್ಕಳಿಗೆ ಆಹಾರ ಕೂಡಿಸಿಡುವಾಗ ಮಾತ್ರ ಬಹು ಜಾಣತನದಿಂದ ಬೇಕಾದ ವಸ್ತುವನ್ನೇ ತಂದುಕೊಳ್ಳುತ್ತವೆ.

ಒಹ್, ಕೆಲಸಮಾಡುತ್ತಿರುವಾಗ ಅವನ್ನು ನೋಡಬೇಕು ನೀವು. ಸ್ವಲ್ಪ ಬಾಗಿರುವ ಗರಗಸದ ಮುಳ್ಳಿನಂತಹ ತುದಿಯುಳ್ಳ ಅದರ ಎರಡು ಮುಂಗಾಲುಗಳೂ ಹೇಗೆ ಆಹಾರವನ್ನು ಬಾಚಿಕೊಳ್ಳುತ್ತವೆ. ಹಾಗೆ ಬಾಚಿಕೊಂಡ ಆಹಾರವನ್ನು ತನ್ನ ಹೊಟ್ಟೆಯ ಅಡಿಗೆ ತಳ್ಳಿಕೊಂಡು ತನ್ನ ಹಿಂಗಾಲುಗಳನ್ನು ಅರ್ಧ ಚಂದ್ರಾಕಾರವಾಗಿ ಬಾಗಿಸಿಕೊಂಡು ಚೆನ್ನಾಗಿ ಉಂಡೆ ಮಾಡುತ್ತವೆ. ಆ ಉಂಡೆ ಬೆಳೆಯುತ್ತದೆ, ಬೆಳೆಯುತ್ತದೆ, ಬೆಳೆಯುತ್ತದೆ, ಕೊನೆಗೆ ಅದನ್ನು ಮಾಡುತ್ತಿರುವ ದುಂಬಿಗಿಂತಲೂ ದೊಡ್ಡದಾಗಿ ಬೆಳೆಯುತ್ತದೆ. ಕೆಲವು ಸಲ ಸೇಬುಹಣ್ಣಿನ ಗಾತ್ರಕ್ಕೆ ಬರುವುದೂ ಉಂಟು. ಇನ್ನು ಆ ಉಂಡೆಯನ್ನು ಮನೆಗೆ ತೆಗೆದುಕೊಂಡು ಹೋಗಬೇಕಲ್ಲ. ತನ್ನ ಹಿಂಗಾಲುಗಳಲ್ಲಿ ಅದನ್ನು ಅಪ್ಪಿಕೊಂಡು ಮಧ್ಯದ ಕಾಲುಗಳಿಂದ ಹಿಂದಕ್ಕೆ ದಬ್ಬುತ್ತಾ, ತಲೆ ನೆಲಕ್ಕೆ ತಾಕುವವರೆಗೂ ಬಗ್ಗಿ, ಮುಂಗಾಲುಗಳಿಂದ ನಡೆದುಕೊಂಡು ಹಿಂದು ಹಿಂದಕ್ಕೆ ಹೋಗುತ್ತದೆ. ಬಹಳ ಹುಷಾರಾಗಿ ಮೆಲ್ಲಮೆಲ್ಲಗೆ ತಳ್ಳಿಕೊಂಡು ಹೋಗುತ್ತದೆ. ದಾರಿಯಲ್ಲಿ ವಿಪತ್ತು ಸಂಭವಿಸದೆ ಅದು ಮನೆ ತಲುಪಿದ್ದೇ ಅಪರೂಪ. ದಾರಿಯಲ್ಲಿ ಒಂದು ಬೆಟ್ಟ ಸಿಗಬಹುದು. ಆಗ ಯಜಮಾನರು ಅಥವಾ ಅಮ್ಮಾವರು ಜಾರಿ ಬಿಡುತ್ತಾರೆ. ಆ ದಪ್ಪಗಿನ ಉಂಡೆ ಅವರನ್ನು ತಲೆಕೆಳಗುಮಾಡಿ ಬೀಳಿಸಿ, ಅವರ ಮೇಲಿಂದ ಉರುಳಿ ಹೋಗಿ, ಕಣಿವೆಯ ತಳವನ್ನು ಸೇರಿ ಬಿಡುತ್ತದೆ. ಆದರೂ ಅವರು ತಮ್ಮನ್ನು ಸವರಿಸಿಕೊಂಡು, ತಮ್ಮ ಮೂಟೆಯನ್ನು ನೂಕಿಕೊಂಡು ಮತ್ತೆ ಹೊರಡುತ್ತಾರೆ.

ಎಂಥ ಬೆಪ್ಪುಲಾಷ್ಟಕ! ಬೆಟ್ಟದ ತಪ್ಪಲಲ್ಲೇ ಸರಿಯಾದ ದಾರಿ ನೋಡಿಕೊಂಡು ಹೋಗಬಾರದೇ? ಅದೇನೂ ಕೇಳಬೇಡಿ. ಪುನಃ ಬೆಟ್ಟ ಹತ್ತೋದೇ ಸೈ. ಬಹುಶಃ ಮನೆ ಬೆಟ್ಟದ ತುದಿಯಲ್ಲಿದೆಯೋ ಏನೊ. ಇದ್ದರೂ ಸ್ವಲ್ಪ ಸರಾಗವಾದ ದಾರಿ ಹಿಡಿಯಬಹುದಿತ್ತು. ಅದು ಕೂಡ ಇಲ್ಲ. ಎಲ್ಲರೂ ಕೈಬಿಟ್ಟಿರುವ ಕಷ್ಟದ ದಾರಿ ಯಾವುದಾದರೂ ಇದ್ದರೆ, ಅದನ್ನೇ . . . ಆ ಬೆಟ್ಟವನ್ನೇ, ಅಮ್ಮಾವರು ಹತ್ತೋದು. ಅಷ್ಟು ದಪ್ಪ

ಮೂಟೆಯನ್ನು ಅಂಥ ಇಳಿಜಾರಿನಲ್ಲೂ ಸ್ವಲ್ಪವೂ ವಾಲಾಡಿಸದೇ ತೆಗೆದು ಕೊಂಡು ಹೋಗುತ್ತದಲ್ಲ. ಅದೇ ಆಶ್ಚರ್ಯ. ಅಯ್ಯೋ ಒಂದು ಸ್ವಲ್ಪ ಹೆಜ್ಜೆ ಇಟ್ಟದ್ದು ಸರಿಯಾಗಲಿಲ್ಲ. ಅದುವರೆಗೆ ಪಟ್ಟ ಶ್ರಮವೆಲ್ಲ ವ್ಯರ್ಥ. ಪುನಃ ಆ ಮೂಟೆ ಒಂದು ಕ್ಷಣದಲ್ಲಿ ತಳ ಸೇರಿತು. ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷ ಎಂದ ಹಾಗೆ. ದುಂಬಿ ಪುನಃ ಹೋಗಿ ಅದನ್ನು ಎಳ ತಂದಿತು. ಈ ಸಲ ಸ್ವಲ್ಪ ಹುಷಾರಾಗಿ ಹೋಗುತ್ತದೆ. ಹೋದ ಸಲ ತಡೆದು ಬೀಳಿಸಿದ ಹುಲ್ಲಿನ ಬೇರಿನಿಂದ ಪಕ್ಕಕ್ಕೆ ಸರಿದು ಹೋಗುತ್ತದೆ.

ಮುಂದೆ ಬಹಳ ಇಳಿಜಾರು. ಜೋಪಾನ! ಯಾವ ಅಡ್ಡಿಯೂ ಇಲ್ಲ ದಿದ್ದರೂ ಹಳ್ಳಕ್ಕೆ ಬಿದ್ದು ಬಿಡುವ ಸಂಭವ ಉಂಟು. ಹೋಗುತ್ತಾ ಹಾಗೇ ಯಾವುದೋ ಉರುಟು ಕಲ್ಲಿನ ಮೇಲೆ ಕಾಲಿಟ್ಟು ಬಿಟ್ಟಿತು. ಪುನಃ....ಬುಡು ಬುಡು ಉರುಳಿಕೊಂಡು ತಳಕ್ಕೆ. ಹೀಗೆ ಹತ್ತುಸಲ....ಇಪ್ಪತ್ತುಸಲ ಜಾರಿ ದರೂ, ಪುನಃ ಪುನಃ ಹೊರಡುತ್ತದೆ. ಮನೆ ಸೇರಿಯೇ ಸೇರುತ್ತದೆ.

ಕೆಲವು ಸಲ, ಅದಕ್ಕೆ ಸಹಾಯಕರು ಸಿಗುವುದುಂಟು. ಎಂಥ ಸಹಾಯಕರು ಅಂದರೆ, ಈ ನಮ್ಮ ಬೂವಾಡಿ ಎಂತಹ ಕಷ್ಟ ಕಾಲದಲ್ಲೂ ಅವರನ್ನು ಕರೆಯುವುದಿಲ್ಲ. ಅವರಾಗಿ ಬಂದಾಗ ಇವಳ ಪಾಡು ಭಗವಂತ ನಿಗೇ ಗೊತ್ತು. ಯಾವುದಾದರೂ ದುಂಬಿ ಚಟುವಟಿಕೆಯಿಂದ ಸೊಗಸಾದ ಉಂಡೆ ಮಾಡಿದ್ದನ್ನು ಸೋಮಾರಿ ದುಂಬಿ ನೋಡಿತು ಅಂತಿಟ್ಟುಕೊಳ್ಳಿ. ಆ ಸೋಮಾರಿ ಬಂದದ್ದೇ ತಡವಾಗಿರುತ್ತದೆ. ಆಗತಾನೆ ಉಂಡೆ ಮಾಡಲು ಪ್ರಾರಂಭಿಸಿರುತ್ತದೆ. ಪೂರ್ತಿ ಮಾಡಲು ಸೋಮಾರಿತನ. ಆಗ ತನ್ನದನ್ನು ಬಿಟ್ಟು, ಇವಳ ಉಂಡೆಯಲ್ಲೇ ಸ್ವಲ್ಪ ಪಾಲು ಕೇಳೋಣ ಅಥವಾ ಕದ್ದೇ ಬಿಟ್ಟರಾಯಿತು, ಎಂದುಕೊಂಡು, ಕೇಳದಿದ್ದರೂ ಸಹಾಯಕ್ಕೆ ಬರುತ್ತದೆ. ಹೊಸದಾಗಿ ಬಂದ ಈ ದುಂಬಿ ಎಷ್ಟೋ ಬಾರಿ ಮೇಲೆ ಕುಳಿತು, ತಳ್ಳುವುದಕ್ಕೆ ಬದಲಾಗಿ ಆ ಉಂಡೆಯನ್ನು ಭದ್ರವಾಗಿ ಹಿಡಿದುಕೊಂಡು ಒಂದಕ್ಕೆರಡ ರಷ್ಟು ಕಷ್ಟ ಕೊಡುತ್ತದೆ. ಉಂಡೆಯನ್ನು ಕಷ್ಟಪಟ್ಟು ಮಾಡಿ ಎಳೆದು ಕೊಂಡು ಹೋಗುತ್ತಿದ್ದ ಬೂವಾಡಿಗೆ ಕಾಲು ಜಾರಿಸಿ ತಾನು ಮಾತ್ರ ಆ ಉಂಡೆಯನ್ನು ಭದ್ರವಾಗಿ ಹಿಡಿದುಕೊಂಡು, ತಾನೂ ಅದರ ಜೊತೆಗೇ ಹಳ್ಳಕ್ಕೆ ಬಿದ್ದು, ಪುನಃ ಅದನ್ನು ಅದರ ನಿಜವಾದ ಯಜಮಾನ ಎತ್ತಲೂ

ಸಾಗದಂತೆ ಮಾಡುತ್ತದೆ. ಒಮ್ಮೊಮ್ಮೆ ಈ ಸೋಮಾರಿ ದುಂಬಿ ಅನುಕೂಲವಾದ ಜಾಗದಲ್ಲಿ ನಿಂತುಕೊಂಡು ಆ ರಸಕವಳದ ಯಜಮಾನನೊಡನೆ ಹೋರಾಡುವುದೂ ಉಂಟು. ತೀರಾ ಅಪರೂಪವಾಗಿ ನಿಜವಾದ ಸಹಾಯ ಮಾಡುತ್ತದೆ. ಆದರೆ ಆ ರಸಕವಳದ ಲಂಚ ಸಿಗುವ ಹಾಗಿದ್ದರೆ ಮಾತ್ರ.

ಬೂವಾಡಿಯ ಗೂಡು ಒಂದು ಪೊಟರೆ. ಒಂದು ಮುಷ್ಟಿಯಷ್ಟು ಅಗಲವಿರುತ್ತದೆ ಅಷ್ಟೆ. ಅಲ್ಲಿಂದ ಹೊರಕ್ಕೆ ಗಾಳಿ ಬೆಳಕಿಗಾಗಿ ಒಂದು ಇಳಿಜಾರಾದ ಮೊಗಸಾಲೆ ಇರುತ್ತದೆ. ತಾನು ಒಳಕ್ಕೆ ಹೋದ ಮೇಲೆ ಸ್ವಲ್ಪ ಮಣ್ಣು, ಕಚಡ ಮುಂತಾದ್ದರಿಂದ ಬಿಲದ ಕಂಡಿಯನ್ನು ಮುಚ್ಚಿಕೊಂಡು ಬಿಡುತ್ತದೆ. ಈ ಕೆಲಸಕ್ಕೋಸ್ಕರವೇ ಬಾಗಿಲಿನ ಹತ್ತಿರ ಸ್ವಲ್ಪ ಕಚಡ ಸಾಮಾನನ್ನು ಪೇರಿಸಿಕೊಂಡಿರುತ್ತದೆ. ಬಾಗಿಲು ಹಾಕಿಕೊಂಡು, ಯಾರ ತೊಂದರೆಯೂ ಇಲ್ಲ ಎಂದು ಖಾತ್ರಿಯಾದ ಮೇಲೆ, ಊಟಕ್ಕೆ ಕುಳಿತುಕೊಂಡು ತಿಂದೂ, ತಿಂದೂ....ಸ್ವಲ್ಪವೂ ನಿಲ್ಲಿಸದೆ ಒಂದೇ ಸಮನಾಗಿ ತಿನ್ನುತ್ತದೆ.

ಗೊಬ್ಬರದ ರಾಶಿಯಲ್ಲಿ ಮುಳುಗಿ ಹೋಗಿರುವ ಆ ಬಣ್ಣದ ದುಂಬಿಯನ್ನು ನೋಡಿದರೆ, ಹಾಕಿದ ಗೊಬ್ಬರವೆಲ್ಲ ಬಣ್ಣ ಬಣ್ಣದ ಹೂವಾಗಿ ಪರಿವರ್ತಿತವಾಗುವ ಆ ರಸಾಯನ ಕ್ರಿಯೆಯ ನೆನಪಾಗುತ್ತದೆ. ಬೂವಾಡಿಯೂ ಇಂಥ ಕೊಳಕು ಕಸವನ್ನು ತಿಂದು, ಬಣ್ಣವಾಗಿ ಬೆಳೆದು, ನಮ್ಮ ವಸಂತೋದ್ಯಾನದ ಹೂವಿನ ಹಾಸಿಗೆಯ ಮೇಲೆ ಮೆರೆಯುತ್ತದೆ.

ಇಂಥ ಸೊಗಸಿನ ಬದಲಾವಣೆ ಸಾಧ್ಯವಾದಷ್ಟು ಬೇಗ ನಡೆಯಬೇಕಲ್ಲ. ಇಲ್ಲದಿದ್ದರೆ ಆ ಕಸದ ಗುಪ್ಪೆ ಊರಿನ ಜನರಿಗೆ ಕಾಯಿಲೆ ತಂದೀತು. ಅವರೆಲ್ಲರ ಒಳ್ಳೆಯದಕ್ಕಾಗಿಯೇ ಈ ದುಂಬಿಗೆ ಏನಂಥ ಕಚಡಾ ತಿಂದರೂ ಭಸ್ಮವಾಗುವಂಥ ಜೀರ್ಣಶಕ್ತಿ.

ಹನ್ನೆರಡು ಗಂಟೆಗಳ ಕಾಲ ಒಂದೇ ಸಮನಾಗಿ ತಿಂದ ದುಂಬಿಯನ್ನು ಫೇಬರ್ ನೋಡಿದ್ದಾನೆ. ಅಷ್ಟೇ ಅಲ್ಲ, ಅದು ತಿನ್ನುತ್ತಿದ್ದಷ್ಟು ಹೊತ್ತೂ, ಆ ಆಹಾರ ಅದರ ಮೈಯನ್ನು ಹೊಕ್ಕು, ಕಪ್ಪು ದಾರದಂತೆ ಹೊರಗೆ ಬರುತ್ತಿತ್ತು. ಸುಮಾರು ಬಳಪದಷ್ಟು ದಪ್ಪಗೆ. ಹನ್ನೆರಡು ಗಂಟೆಗಳ ಕಾಲದಲ್ಲಿ ಮೂರು ಗಜ ಉದ್ದಕ್ಕೆ ಆ ಕಪ್ಪು ದಾರ ಹೊರಬಂದಿತ್ತು.

ಒಂದು ದಿನ ಒಬ್ಬ ದನ ಕಾಯುವವನು ಫೇಬರ್ ಕೈಗೆ ಒಂದು ಸಪೋಟ ಹಣ್ಣು ತಂದು ಕೊಟ್ಟ. ಅದು ಕಂದು ಬಣ್ಣಕ್ಕೆ ಥಳ ಥಳ ಎಂದು ಹೊಳೆಯುತ್ತಿತ್ತು. ಅದು ಅವನಿಗೆ ಬೂವಾಡಿಯ ಗೂಡಿನಲ್ಲಿ ಸಿಕ್ಕಿತಂತೆ. ಅವನ ಮಕ್ಕಳು ಸುತ್ತಿಕೊಂಡು ಅದನ್ನು ತಮಗೆ ಆಟಕ್ಕೆ ಕೊಡು ಎಂದು ಪೀಡಿಸುತ್ತಿದ್ದರು. ಆದರೆ ಸ್ವಲ್ಪ ಸೀಬೆಯ ಹಣ್ಣಿನಂತೆ ಮೂತಿಯಿದ್ದ ಆ ಸಪೋಟವನ್ನು ಅವನು ಫೇಬರನ ಕೈಗೆ ಕೊಡುತ್ತಾ 'ಇನ್ನೂ ಒಂದು ಇಂಥದೇ ಸಿಕ್ಕಿತ್ತು, ಸರಿಯಾಗಿ ತಿಳಿಯದೆ ಒಡೆದು ಬಿಟ್ಟೆ, ಒಳಗೆ ಗೋದಿಯ ಕಾಳಿನಷ್ಟು ದಪ್ಪದ ಮೊಟ್ಟೆಯಿತ್ತು' ಎಂದ.

ಫೇಬರನಿಗೆ ಅದನ್ನು ಕೇಳಿ ಆಶ್ಚರ್ಯವಾಯಿತು. ಆ ದುಂಬಿಗಳು ಯಾವಾಗಲೂ ಎಲ್ಲವನ್ನೂ ದುಂಡಗೇ ಮಾಡುತ್ತಿದ್ದುದರಿಂದ, ಅಂಥಹ ಯಾವುದೋ ಉಂಡೆಯಲ್ಲೆ ಅವುಗಳ ಮೊಟ್ಟೆಯೂ ಇರಬೇಕು ಎಂದು ಕೊಂಡಿದ್ದ. ಈಗ ಆ ಮೊಟ್ಟೆಯನ್ನು ನೋಡಬೇಕು ಎಂದು ಎಷ್ಟು ಆಸೆ ಯಾದರೂ, ಆ ಕಂದು ಬಣ್ಣದ ಪೇರಿಲವನ್ನು ಅವನು ಒಡೆಯುವ ಹಾಗಿಲ್ಲ. ಅಂತದು ಇನ್ನೊಂದು ಸಿಗದೆ ಹೋದರೆ? ಆದ್ದರಿಂದ ಮಾರನೆಯ ದಿನ ಬೆಳಗಿನವರೆಗೂ ಕಾದು ಆ ಗೊಲ್ಲನ ಜೊತೆ ಹೊರಟ. ಕೊನೆಗೂ ಅವು ಸಿಕ್ಕಿದುವು. ದನ ಕಾಯುವವನು ಮೆಲ್ಲಗೆ ಫೇಬರನ ಕರಣೆಯಿಂದ ಗೂಡಿನ ಮೇಲ್ಭಾಗವನ್ನು ಎಬ್ಬಿದಾಗ, ಒಳಗಿದ್ದುವು ಆ ಕಂದು ಸೀಬೆಗಳು. ಇದರೊಳಗೆಲ್ಲಿದೆಯೋ ಮೊಟ್ಟೆ ?

ಸಗಣಿ ದುಂಬಿ ಅಮ್ಮನವರು ಅದನ್ನು ಹೇಗೆ ಮಾಡಿದರು ? ಫೇಬರ್ ಹೇಳುತ್ತಾನೆ. ತನ್ನ ಪುಟ್ಟ ಮರಿಯ ಯೋಚನೆ, ಶ್ರೀಮತಿ ದುಂಬಿಗೆ ಬಂದಾಗ ತುಂಬ ರುಚಿಯಾದ ಪುಷ್ಟಿಕರವಾದ ಆಹಾರವನ್ನು ಹುಡುಕಿ ತರುತ್ತದೆ. ಅಂದರೆ ಹಸುವಿನ ಸಗಣಿಯನ್ನು ತರುತ್ತದೆ. ದಾರಿಯಲ್ಲಿ ಕಳ್ಳಕಾಕರ ಭಯವಿದ್ದರೂ ಇನ್ನಿಲ್ಲದಷ್ಟು ಎಚ್ಚರಿಕೆಯಿಂದ ಸೊಗಸಾದ ಉಂಡೆ ಕಟ್ಟುತ್ತದೆ. ಅದರ ಗೂಡಿನೊಳಕ್ಕೆ ಗಾಳಿ ನುಗ್ಗಿದಾಗ ಈ ಪೇರಿಲ ಒಣಗಿ ಹೋದರೆ ಪುಟ್ಟ ಮರಿಗೆ ಅದನ್ನು ತಿನ್ನುವುದಕ್ಕೇ ಆಗುವುದಿಲ್ಲ. ಆದ್ದರಿಂದ ಎಂಥ ಗಾಳಿ ಬೀಸಿದರೂ ಒಣಗದ ಹಾಗೆ ಅದರ ಹೊರಭಾಗ ವನ್ನು ಹೊಳೆಯುವಷ್ಟು ನಯ ಮಾಡುತ್ತದೆ. ಹಾಗೆ ಮಾಡಿದಾಗ ಗಾಳಿ

ಒಳಕ್ಕೆ ಹೋಗದೆ ಒಳಗಿನ ಕವಳ ಮೆತ್ತಗೆ ತೇವವಾಗೇ ಇರುತ್ತದೆ. ಉಂಡೆಯ ಒಂದು ತುದಿಯಲ್ಲಿ ಸ್ವಲ್ಪ ಹಳ್ಳ ಇರುತ್ತದೆ. ಅದರ ಅಂಚು ಕುಂಬಾರರು ಮಾಡಿದ ಮಡಕೆಯ ಬಾಯಂತೆ ಮಾಡಲ್ಪಟ್ಟಿರುತ್ತದೆ. ಆ ತೂತಿನೊಳಕ್ಕೆ, ತನ್ನ ಹತ್ತಿರ ಇರುವುದರಲ್ಲೆಲ್ಲಾ ಸೊಗಸಾದ, ಮೆತ್ತಗಿರುವ ಸ್ವಲ್ಪ ನೀರಾದ ಆಹಾರವನ್ನು ಹಾಕಿರುತ್ತದೆ. ಪಾರಿವಾಳಗಳೂ ಅಷ್ಟೆ, ತಮ್ಮ ಮರಿಗಳಿಗೆ ನೀರಾದ ಆಹಾರ ತಿನ್ನಿಸುತ್ತವೆ. ತಾವು ಮೊದಲು ಚೆನ್ನಾಗಿ ಅಗಿದು ಆಮೇಲೆ ಅದನ್ನು ಮರಿಯ ಬಾಯಿಗೆ ಹಾಕುತ್ತವೆ. ಆಮೇಲೆ ಆ ಸಣ್ಣ ತೂತಿನಲ್ಲಿ ಆ ಆಹಾರದ ಮೇಲೆ ಮೊಟ್ಟೆಯಿಟ್ಟು ಅದರ ಬಾಯನ್ನು ಒಂದೇ ಒಂದು ಸಣ್ಣ ಕಿಂಡಿಯಷ್ಟು ಚಿಕ್ಕದಾಗಿ ಮಾಡಿ ಬಿಡುತ್ತದೆ. ಕೊನೆಗೆ ಸುತ್ತಲೂ ಚೆನ್ನಾಗಿ ಉಜ್ಜಿ ಸಪೋಟ ಹಣ್ಣಿನಂತೆ ಕಾಣುವ ಹಾಗೆ ಮಾಡಿಟ್ಟು ಬಿಡುತ್ತದೆ.

ಮೊಟ್ಟೆಯೊಡೆದು ಮರಿಯಾದಾಗ ಅದರ ಮುಂದೆ ಸೊಗಸಾದ ಮೆತ್ತಗಿನ ಆಹಾರ ಇರುತ್ತದೆ. ಸಣ್ಣ ಕಿಂಡಿಯಿಂದ, ಅದಕ್ಕೆಷ್ಟು ಬೇಕೋ ಅಷ್ಟೇ ಗಾಳಿ ಆಡುತ್ತಿರುತ್ತದೆ."

"ಮೊಟ್ಟೆ ಏನಾದರೂ ಆಹಾರದ ಮಧ್ಯದಲ್ಲಿದ್ದರೆ ಮರಿಗೆ ಉಸಿರು ಕಟ್ಟಿ ಸತ್ತೇ ಹೋಗುತ್ತಿತ್ತು ಅಲ್ಲ?" ಎಂದು ಕೇಳಿದ್ದು ವಸಂತಿ.

"ಹೌದು....ಆಮೇಲೆ ಅದು ಬೆಳೆಯುತ್ತಾ ಹೋದ ಹಾಗೆಲ್ಲ ತನ್ನ ಮುಂದಿರುವ ಆಹಾರವನ್ನು ತಿನ್ನುತ್ತಾ ಹೋಗುತ್ತದೆ. ಅದೇನಾದರೂ ತಿನ್ನುವುದಕ್ಕಾಗದಷ್ಟು ಒಣಗಿಹೋಗಿದ್ದರೆ ಈ ಕಡೆಯ ಕಿಂಡಿಯಿಂದ ಹೊರಕ್ಕೂ ಹೋಗಬಹುದು."

"ಇದೆಲ್ಲ ಫೇಬರನಿಗೆ ಹೇಗೆ ತಿಳಿಯಿತು. ಅದು ಗೂಡಿನ ಬಾಗಿಲನ್ನು ಮುಚ್ಚಿಕೊಂಡಿತ್ತಲ್ಲ?" ಕೇಳಿದ ಬಾಲು.

"ಇದನ್ನೆಲ್ಲ ಕಂಡುಹಿಡಿಯುವುದಕ್ಕೆ ಅವನು ಒಂದು ಪುಟ್ಟ ಗಾಜಿನ ಗೋಡೆಯಿರುವ ಮನೆ ಮಾಡಿದ್ದ. ಅದಕ್ಕೆ ಮಹಡಿಯಿತ್ತು. ಮೇಲಿನ ರೂಮಿನಿಂದ ಕೆಳಗಿನ ರೂಮಿಗೆ ಬರುವುದಕ್ಕೆ ಸ್ವಲ್ಪ ಇಳಿಜಾರಾದ ನೆಲ ಮಾಡಿದ್ದ. ಕೆಳಗಿನ ರೂಮಿಗೆ ಒಂದು ಸಣ್ಣ ಕಿಟಕಿ, ಅದಕ್ಕೊಂದು ಬಾಗಿಲು ಮಾಡಿಕೊಂಡಿದ್ದ. ಬೂವಾಡಿಯನ್ನು ಅದರ ಆಹಾರದ ಉಂಡೆ

ಯೊಡನೆ ಅಲ್ಲಿ ಸೆರೆಹಾಕಿದ್ದ. ಕೆಳಗಿನ ಕೋಣೆಯಲ್ಲಿ ದುಂಬಿ ತನ್ನ ಕೆಲಸ ಮಾಡುತ್ತಿತ್ತು. ಆಗಾಗ ಕಿಟಕಿಯ ಬಾಗಿಲು ತೆರೆದು, ಒಂದೇ ಒಂದು ಕ್ಷಣ ಒಳಕ್ಕೆ ಇಣುಕಿ ತಕ್ಷಣ ಬಾಗಿಲು ಮುಚ್ಚಿ ಬಿಡುತ್ತಿದ್ದ. ಹೊರಗಿನ ಬೆಳಕು ಸ್ವಲ್ಪ ಕಂಡರೂ ಸಾಕು ದುಂಬಿ ತನ್ನ ಕೆಲಸ ನಿಲ್ಲಿಸಿ ಮೇಲಿನ ಕೋಣೆಗೆ ಹೋಗಿ ಬಿಡುತ್ತಿತ್ತು. ಆದರೆ ಆ ಸಪೋಟದೊಳಗಿದ್ದರಲ್ಲ ಸಣ್ಣ ಯಜಮಾನರು ಅವರು ಫೇಬರನಿಗೆ ಇಷ್ಟು ಅವಕಾಶವನ್ನೂ ಕೊಡುತ್ತಿರಲಿಲ್ಲ. ಮೂತಿ ಇರುವ ಸಪೋಟದೊಳಗೆ ಏನು ನಡೆಯುತ್ತದೆ ನೋಡೋಣ ಎಂದು ಆ ಉಂಡೆಯಲ್ಲಿ ಸ್ವಲ್ಪ ಕಂಡಿ ಮಾಡಿದಾಗಲೆಲ್ಲ ಆ ಮರಿ ಸಹಿಸದೆ ತನ್ನ ಮೈಯಿನ ಕೊಳಕಿನಿಂದ ಆ ಕಿಂಡಿಯನ್ನು ಮುಚ್ಚಿಬಿಡುತ್ತಿತ್ತು.

ಮಕ್ಕಳು ಎಲ್ಲೆಲ್ಲಿ ಹುಡುಕಿದರೂ ಅವುಗಳ ಕೈಗೆ ಆ ಮರಿಗಳಿರುವ ಉಂಡೆ ಸಿಗುತ್ತಿರಲಿಲ್ಲ. ಅವು ನೆಲಮಾಳಿಗೆಯಲ್ಲಿ ಭದ್ರವಾಗಿರುತ್ತವೆ. ಮಕ್ಕಳು ಮರಿಗಳಿರುವ ಆ ತೊಟ್ಟಿಲನ್ನು ಅಲ್ಲಲ್ಲಿ ಕೈಕಾಲಿಗೆ ಸಿಗುವಂತೆ ಹಾಕುತ್ತಾರೆಯೇ? ಯಾವ ತೊಂದರೆಯೂ ಬರದೆ ಎಲ್ಲಾ ಒಳ್ಳೆಯದಾದರೆ, ಮೊಟ್ಟೆಯೊಡೆದು ಮರಿಯಾಗಿ ಗೂನು ಬೆನ್ನಿನ ಕೊಬ್ಬಿದ ಕಂಬಳಿ ಹುಳುವಾಗುತ್ತದೆ. ಒಳಗೆ ಅಡಕಿದ ಆಹಾರವನ್ನೆಲ್ಲ ನುಂಗಿ ಪೇರಿಲದ ತುಂಬಾ ತಾನೇ ತುಂಬಿಕೊಳ್ಳುತ್ತದೆ. ನಾಲ್ಕು ವಾರಗಳಾದ ಮೇಲೆ ತನ್ನ ಚರ್ಮವನ್ನು ಕಳಚಿಹಾಕಿ ಮುದ್ದಾದ ಪೊರೆಹುಳುವಾಗುತ್ತದೆ. ಅದರ ಎರಡು ಪಕ್ಕದಲ್ಲೂ ಉದ್ದವಾದ ರೆಕ್ಕೆಗಳು ಮಡಿಸಿಕೊಂಡು ಗುರಾಣಿಯ ಹಾಗಿವೆ. ಮುಂದಿನ ಎರಡು ಕಾಲುಗಳು ತಲೆಯ ಕೆಳಗೆ ಮಡಿಸಿಕೊಂಡಿವೆ. ಒಳ್ಳೆಯ ಮೇಣದಲ್ಲಿ ಮಾಡಿದ ಬೊಂಬೆಯ ಹಾಗೆ ಜೇನುತುಪ್ಪದ ಬಣ್ಣಕ್ಕೆ ಪಾರದರ್ಶಕವಾಗಿದೆ. ಇನ್ನೂ ನಾಲ್ಕು ವಾರಗಳವರೆಗೆ ಹೀಗೇ ಇರುತ್ತದೆ. ಆಮೇಲೆ ಅದು ಅಚ್ಚುಕೆಂಪು ಬಣ್ಣದ ತಲೆ ಮತ್ತು ಎದೆ, ಬಿಳಿಯ ಹೊಟ್ಟೆ, ಹಳದೀ ಚುಕ್ಕಿಗಳಿರುವ ತೆಳ್ಳಗಿನ ಬಿಳಿಯ ರೆಕ್ಕೆಗಳಿರುವ ದುಂಬಿಯಾಗುತ್ತದೆ. ಇಷ್ಟು ಸೊಗಸಾದ ರಾಜಪುರೋಹಿತರ ವೇಷ ಇರುವುದು ಸ್ವಲ್ಪ ಕಾಲ ಮಾತ್ರ. ಅದೇ ಕ್ರಮೇಣ ಕಪ್ಪುಬಣ್ಣಕ್ಕೆ ತಿರುಗಿಕೊಳ್ಳುತ್ತದೆ. ಇನ್ನೊಂದು ತಿಂಗಳಲ್ಲಿ ತನ್ನ ಬಿಡಾರವನ್ನೊಡೆದು ಹೊರಕ್ಕೆ ಬರಲು ಸಿದ್ಧವಾಗುತ್ತದೆ. ಅದರ ಅದೃಷ್ಟಕ್ಕೆ ಒಂದು ಸಣ್ಣ ಮಳೆ ಬಂದರೂ

ಸಾಕು, ಗುಡಾರವನ್ನು ಸುಲಭವಾಗಿ ಒಡೆಯಲು ಅನುಕೂಲವಾಗುತ್ತದೆ. ಹೊರಕ್ಕೆ ಬಂದಮೇಲೆ ಬೆಚ್ಚಗಿನ ಸೂರ್ಯಕಿರಣಗಳಲ್ಲಿ ದಿನವೆಲ್ಲಾ ಓಡಾಡುತ್ತದೆ.

ಮೊದಲನೆಯ ಸಲ ಬೆಳಕಿಗೆ ಬಂದಾಗ ಅದಕ್ಕೆ ಏನೆನ್ನಿಸಬಹುದು?"

# ನವಿಲುಗಣ್ಣಿನ ಪತಂಗ

"ಅಕ್ಕಾ, ಫೇಬರ್ ಚಿಟ್ಟೆಗಳ ಕಥೆ ಬರೆದಿಲ್ಲವೆ?"

"ಬರೆದಿದ್ದಾನೆ. ಈ ವಾರ ಆ ಕಥೇನೇ ಹೇಳೋಣ. ನವಿಲುಗಣ್ಣಿನ ಪತಂಗ ಅಂತ ಬಹುದೊಡ್ಡ ಚಿಟ್ಟೆ ಇದೆ. ಅದರ ವಿಷಯ ಕೇಳುವುದಕ್ಕೆ ಚೆನ್ನ.

ನವಿಲುಗಣ್ಣಿನ ಪತಂಗಗಳು ಒಂದು ಸಲ ಫೇಬರನ ಮನೆಗೆ ಮುತ್ತಿಗೆ ಹಾಕಿದ್ದುವು. ಒಂದೇ, ಎರಡೇ....ಹಿಂಡು ಹಿಂಡಾಗಿ....ಎಲ್ಲಿಂದ ಬಂದುವು? ಏಕೆ ಬಂದಿದ್ದುವು? ಅದೊಂದು ಸ್ವಾರಸ್ಯವಾದ ಕಥೆ.

ನವಿಲುಗಣ್ಣಿನ ಪತಂಗ ಅಂದರೆ ಬಹಳ ಭರ್ಜರಿ ಪತಂಗ. ಬಹಳ ದೊಡ್ಡದು. ಅದು ಹಾರಾಡುವಾಗ ಇದ್ಯಾವ ಪುಟ್ಟ ಹಕ್ಕಿ ಎಂದು ಆಶ್ಚರ್ಯ ಪಡುವಷ್ಟು ದೊಡ್ಡದು. ಅದಕ್ಕೆ ಕೇಸರಿ ಬಣ್ಣದ ಮಕಮಲಿನ ಮೈಯಿದ್ದು, ಕೊರಳಿನ ಸುತ್ತ ಬಿಳಿಯ ತುಪ್ಪಳದ ಮಫ್ಲರ್ ಸುತ್ತಿಕೊಂಡ ಹಾಗಿರುತ್ತದೆ. ಕಂದುಬಣ್ಣದ ಮೇಲೆ, ಸ್ವಲ್ಪ ಊದಾ ಬಣ್ಣ ಹಚ್ಚಿದ ಅದರ ರೆಕ್ಕೆಗಳಿಗೆ ತೆಳ್ಳಗೆ ವಂಕಿ ವಂಕಿಯಾದ ಹಾಲುಬಿಳುಪಿನ ಗೆರೆಗಳು. ಹಾಲುಬಿಳುಪಿನ ಅಂಚು. ರೆಕ್ಕೆಗಳ ಮಧ್ಯದಲ್ಲಿ ಒಂದೊಂದು ದುಂಡು ಕಣ್ಣುಗಳು. ಮಧ್ಯದಲ್ಲಿರುವ ಕಣ್ಣಿನ ಪಾಪೆ ಕಪ್ಪಾದರೂ ಅದರ ಸುತ್ತ ಇರುವ ಪೊರೆ ಬಣ್ಣಬಣ್ಣದ್ದು. ಅದರ ಮೇಲೆ ಕಪ್ಪು, ಬಿಳಿ, ಬೂದುಗೆಂಪು, ಕೆಂಪುಮಿಶ್ರ ಕಂದುಬಣ್ಣಗಳ ಕಾಮನಬಿಲ್ಲಿನ ಸಿಂಗಾರ."

"ಓ....ಎಷ್ಟು ಚೆನ್ನಾಗಿರುತ್ತದೆ ನೋಡೋದಕ್ಕೆ" ಎಂದಳು ವಸಂತಿ.

"ಹೌದು. ಹೌದು....ಆದರೆ ಯಾಕೆ ಬಂದಿದ್ದುವಂತೆ....ಅವು....ಹಿಂಡುಹಿಂಡಾಗಿ...." ಅವಸರಪಟ್ಟ ಬಾಲು.

"ಯಾಕೆಂದರೆ, ಮೇ ತಿಂಗಳು ಆರನೆಯ ತಾರೀಖಿನ ಬೆಳಿಗ್ಗೆ ಫೇಬರನ ಮೇಜಿನ ಮೇಲಿದ್ದ ಗೂಡನ್ನು ಒಡೆದುಕೊಂಡು ಹೆಣ್ಣು ಪತಂಗವೊಂದು ಹೊರಬಂತು.

ಸುಮ್ಮನೆ, ಇರಲಿ ನೋಡೋಣ ಎಂದು ಫೇಬರ್ ಒಂದು ದೊಡ್ಡ

ಗಂಟೆಯಾಕಾರದ ತಂತಿಯ ಬಲೆಯನ್ನು ಆ ಹೊಸ ಹುಡುಗಿಯ ಮೇಲೆ ಬೋರಲು ಹಾಕಿದ.

ಆಮೇಲೆ ಬೇರೆ ಯಾವುದೋ ಕೆಲಸದಲ್ಲಿ ಆ ವಿಷಯವನ್ನು ಮರತೇ ಬಿಟ್ಟ. ರಾತ್ರಿ ಒಂಭತ್ತು ಗಂಟೆಯಾಗಿತ್ತು. ಎಲ್ಲರೂ ಮಲಗುವುದಕ್ಕೆ ಹೊರಟಿದ್ದರು. ಆಗ ಪಕ್ಕದ ರೂಮಿನಿಂದ, ಫೇಬರನ ಕಿರಿಯ ಮಗ ಪಾಲ್ ಫೇಬರನನ್ನು ಕರೆಯಲಾರಂಭಿಸಿದ. 'ಬಾ ಅಣ್ಣ, ಬೇಗ ಬಾ, ಇಲ್ಲಿ ನೋಡು, ಈ ಚಿಟ್ಟೆಗಳು ಒಳ್ಳೆ ಹಕ್ಕಿಗಳ ಹಾಗಿವೆ.' ಫೇಬರ್ ಓಡಿಹೋಗಿ ನೋಡದಾಗ ಆ ಚಿಕ್ಕ ಹುಡುಗ ಹೇಳಿದ್ದು ಸರಿಯಾಗೇ ಇತ್ತು. ಅವರ ಮನೆಗೆ ಅವು ಹಿಂದೆಂದೂ ಹಾಗೆ ದಂಡಯಾತ್ರೆ ಮಾಡಿರಲಿಲ್ಲ. ಆಗಲೇ ನಾಲ್ಕು ಪತಂಗಗಳನ್ನು ಗುಬ್ಬಿಯ ಪಂಜರದಲ್ಲಿ ಸೇರಿಸಿದ್ದ ಪುಟ್ಟ ಪಾಲ್. ಅವುಗಳ ಮಧ್ಯೆ ಹುಚ್ಚನಂತೆ ಕೂಗಾಡುತ್ತಾ, ಎಡವುತ್ತ, ಮುಗ್ಗರಿಸುತ್ತ ಇದ್ದ. ಪತಂಗಗಳಲ್ಲಿ ಕೆಲವು ಸೂರಿನ ಹತ್ತಿರ ಹಾರಾಡುತ್ತಿದ್ದುವು.

ಅವುಗಳನ್ನು ನೋಡಿದ ತಕ್ಷಣ ಫೇಬರನಿಗೆ ಬೆಳಗ್ಗೆ ತಾನೆ ಸೆರೆಯಲ್ಲಿಟ್ಟ ಪತಂಗ ನೆನಪಿಗೆ ಬಂದಿತು. 'ಮಗೂ, ಸ್ವೆಟರ್ ಹಾಕಿಕೊಂಡು ನಡೆ....ಇನ್ನೂ ತಮಾಷೆ ಕಾದಿದೆ ನಮಗೆ' ಎನ್ನುತ್ತ ಮನೆಯ ಬಲ ಪಾರ್ಶ್ವಕ್ಕಿದ್ದ ಓದುವ ಕೋಣೆಗೆ ಹೊರಟ. ಅಡುಗೆಯ ಮನೆಯಲ್ಲಿ, ಕೆಲಸದಾಕೆ ಬಿಳಿಚಿಕೊಂಡ ಮುಖದಿಂದ ಒದ್ದಾಡುತ್ತಿದ್ದಳು. ಆ ಚಿಟ್ಟೆಗಳನ್ನೆಲ್ಲ ಬಾವಲಿಗಳು ಎಂದುಕೊಂಡು, ಹಿಡಿಯಲು ಶತ ಪ್ರಯತ್ನ ಮಾಡುತ್ತಿದ್ದಳು.

ಆ ಪತಂಗಗಳು ಫೇಬರನ ಮನೆಗೆ ಎಲ್ಲ ದಿಕ್ಕಿನಿಂದಲೂ ಮುತ್ತಿಗೆ ಹಾಕಿದ್ದುವು. ಮುತ್ತಿಗೆಗೆ ಸೆರೆಯಲ್ಲಿರುವ 'ಆ ರಾಜಕುಮಾರಿಯೇ' ಕಾರಣ. ಅಂದಮೇಲೆ ಆ ಕೊಠಡಿಯಲ್ಲಿ ಏನೇನು ನಡೆದಿದೆಯೋ?.... ಪುಣ್ಯಕ್ಕೆ ಆ ರೂಮಿನ ಎರಡು ಕಿಟಕಿಗಳು ತೆರೆದಿದ್ದುವು.

ಮೇಣದ ಬತ್ತಿಯ ದೀಪವನ್ನು ಹಿಡಿದುಕೊಂಡು ಫೇಬರ್ ಮತ್ತು ಪಾಲ್ ಇಬ್ಬರೂ ರೂಮಿನೊಳಗೆ ಕಾಲಿಟ್ಟರು. ಓ....ಅವರು ಕಂಡ ದೃಶ್ಯ ಮರೆಯಲಾಗದಂಥಹುದು. ತುಂಬ ಮೃದುವಾಗಿ ಅವು ತಮ್ಮ ರೆಕ್ಕೆಗಳನ್ನು

ಆಡಿಸುತ್ತಾ, ಆ ದೊಡ್ಡ ತಂತಿಯ ಬಲೆಯ ಸುತ್ತಲೂ ಹಾರಾಡುತ್ತಿದ್ದುವು. ಸುತ್ತ ಸಡಗರದಿಂದ ಹಾರಾಡಿ, ಮೇಲೇರಿ, ಪುನಃ ಬಂದು, ಪುನಃ ಹೋಗಿ ತಮ್ಮ ಸಂತೋಷವನ್ನು ತೋರಿಸಿಕೊಳ್ಳುತ್ತಿದ್ದುವು. ಮೇಣದ ದೀಪದ ಹತ್ತಿರ ಬಂದು ತಮ್ಮ ರೆಕ್ಕೆಯಿಂದ ಮುಟ್ಟಿ ಒಂದೇ ಸಲಕ್ಕೆ ಅದನ್ನು ಆರಿಸಿ ಬಿಟ್ಟವು. ಫೇಬರ್ ಮತ್ತು ಪಾಲ್‌ನ ಭುಜಗಳ ಮೇಲೆ ಕುಳಿತುವು. ಅವರ ಬಟ್ಟೆಗಳನ್ನು ಹಿಡಿದುಕೊಂಡುವು. ಅವರ ಮುಖವನ್ನು ಸವರಿದುವು. ಇಡೀ ರೂಮು ಯಾವುದೋ ಮಾಟಗಾರನ ಕತ್ತಲೆಯ ಗುಹೆಯಂತೆ ಕಂಡಿತು. ಅವನ ಸೇವಕರಾದ ಪಿಶಾಚಿಗಳು ಈ ಬಾವಲಿಗಳಂತೆ ರೂಪ ಹೊತ್ತು ಹಾರುತ್ತಿವೆ ಎನ್ನಿಸುತ್ತಿತ್ತು. ಪಾಲ್ ಹೆದರಿ ತಂದೆಯ ಕೈಯನ್ನು ಭದ್ರವಾಗಿ ಹಿಡಿದುಕೊಂಡ.

ಅವು ಎಷ್ಟಿರಬಹುದು....ಸುಮಾರು ಇಪ್ಪತ್ತು ಇದ್ದುವು. ಅಡಿಗೆಮನೆಯಲ್ಲಿ, ಬೇರೆ ರೂಮುಗಳಲ್ಲಿ ದಾರಿ ಕಾಣದೆ ಅಲೆಯುತ್ತಿದ್ದುವೆಲ್ಲ ಸೇರಿ ಸುಮಾರು ನಲವತ್ತು ಇರಬಹುದು. ಆ ಸಂಜೆಯನ್ನು ಫೇಬರ್ ಎಂದಿಗೂ ಮರೆಯಲಿಲ್ಲ.

ಈ ನಲವತ್ತು ಜನ ಯುವಕರು, ಅವನ ಓದುವ ಕೋಣೆಯಲ್ಲಿ ಗುಟ್ಟಾಗಿ ಹುಟ್ಟಿದ ಹುಡುಗಿಗೆ ಗೌರವ ಸೂಚಿಸಲು ಬಂದಿದ್ದಾರಲ್ಲ. ಇವರಿಗೆ ಅವಳು ಇಲ್ಲಿ ಹುಟ್ಟಿದ್ದು ಹೇಗೆ ತಿಳಿಯಿತು ?

ಒಳ್ಳೆಯದು. ಇವರನ್ನೆಲ್ಲ ನಾಳೆ ಪರೀಕ್ಷೆ ಮಾಡೋಣ. ಇವತ್ತು ಯಾಕೆ ಇವರನ್ನು ತೊಂದರೆ ಮಾಡೋದು. ಈ ರಾಜಕುಮಾರರೆಲ್ಲ ತಮ್ಮ ಪ್ರೀತಿಯನ್ನು ಅವಳಿಗೆ ಹೇಳಿಕೊಳ್ಳಲಿ. ದೀಪದಿಂದ ಅವರಿಗೆ ತೊಂದರೆ. ಅದನ್ನು ಆರಿಸಲು ಬಂದು ಅವರು ತಮ್ಮ ರೆಕ್ಕೆಗಳನ್ನು ವ್ಯರ್ಥವಾಗಿ ಸುಟ್ಟುಕೊಳ್ಳುತ್ತಿದ್ದಾರೆ. ಇವರನ್ನು ಪರೀಕ್ಷಿಸುವುದಕ್ಕೆ ಸ್ವಲ್ಪ ಸಿದ್ಧತೆ ಬೇಕು ಎಂದುಕೊಂಡು ಫೇಬರ್ ಅವುಗಳನ್ನು ಆ ರಾತ್ರಿ ಬಿಟ್ಟುಹೋದ.

ಫೇಬರಿಗೆ ಬಹಳ ಮುಖ್ಯವಾಗಿ ಬೇಕಾಗಿದ್ದ ವಿಷಯವೆಂದರೆ, ಇಲ್ಲಿ ಅವರ ರಾಜಕುಮಾರಿ ಇರುವುದು ಈ ವೀರ ಪುರುಷರಿಗೆ ಹೇಗೆ ತಿಳಿಯಿತು ಎನ್ನುವುದು. ಅವರು ಪ್ರತಿರಾತ್ರಿಯೂ ಬರುತ್ತಿದ್ದುದು ಎಂಟರಿಂದ ಹತ್ತು ಗಂಟೆಯ ಒಳಗೆ. ಹೊರಗೆ ಗಾಳಿ ಬಿರುಸಾಗಿ ಬೀಸುತ್ತಿತ್ತು. ಆಕಾಶ

ಕಪ್ಪು ಮೋಡಗಳಿಂದ ತುಂಬಿ ಕಗ್ಗತ್ತಲೆ ಎಂದರೆ ಅಂಥಾ ಕಗ್ಗತ್ತಲೆ ಕವಿದಿತ್ತು. ಫೇಬರನ ಮನೆಯ ಸುತ್ತಲಿನ ತೋಟದಲ್ಲಂತೂ ನಿಮ್ಮ ಕೈಯೇ ನಿಮಗೆ ಕಾಣದಂಥ ಕತ್ತಲು.

ಫೇಬರನ ಮನೆ ಎತ್ತರವಾದ ಪ್ಲೇನ್ ಮರಗಳ ಮಧ್ಯೆ ಮರೆಯಾಗಿತ್ತು. ಲಿಲಾಕ್ ಮತ್ತು ಗುಲಾಬಿಯ ಬಳ್ಳಿಗಳು ಅದಕ್ಕೆ ಹಬ್ಬಿ ಪೊದೆಯಂತೆ ಹೆಣೆದುಕೊಂಡು ಬಿಟ್ಟದ್ದುವು. ಇವುಗಳಿಗೆ ತೆರೆ ಹಾಕಿದಂತೆ ಸೈಪ್ರೆಸ್ ಮರಗಳು ಬೆಳೆದು ಮುಚ್ಚಿಕೊಂಡಿದ್ದುವು. ಇವುಗಳ ಪೊದೆ ಪೊದೆಯಾದ ಕೊಂಬೆಗಳ ಸಂದಿಯಲ್ಲೂ ತೂರಿ ತಮ್ಮ ನೆಂಟನ್ನು ಹುಡುಕಿಕೊಂಡು ಬಂದಿದ್ದವು ಆ ಪತಂಗಗಳು.

ಈ ಕೆಲಸ ಬಹುಶಃ ಅವುಗಳ ಕಣ್ಣಿನದು ಇರಲಾರದು ಅಥವಾ ಅವಕ್ಕೆ ಇಂಥ ಕತ್ತಲೆ, ಅಡ್ಡಿ ಆತಂಕಗಳಲ್ಲೂ ಕಾಣುವ ವಿಚಿತ್ರ ಕಣ್ಣುಗಳಿರಬೇಕು ? ಹಾಗೊಂದು ವೇಳೆ ಇದ್ದರೆ ಅವು ನೇರವಾಗಿ ಹೆಣ್ಣು ಪತಂಗ ಇರುವ ಕೋಣೆಗೆ ಬರಬೇಕಾಗಿತ್ತು. ಆದರೆ ಅವು ಮನೆಯೆಲ್ಲಾ ಪರದಾಡಿ ಕೊನೆಗೆ ಇಲ್ಲಿಗೆ ಬಂದುವು. ಅಥವಾ ವಾಸನೆಯಿಂದ ತಿಳಿದುಕೊಂಡಿರಬಹುದು! ಎಂಥೆಂಥಾ ಮನುಷ್ಯರ ಮೂಗಿಗೂ ಆ ಪತಂಗದಲ್ಲಿ ಯಾವ ವಾಸನೆಯೂ ಕಾಣಲಿಲ್ಲ. ಮಕ್ಕಳ ಮೂಗಿನಂಥ ಸೂಕ್ಷ್ಮವಾದ ಮೂಗಿಗಾದರೂ ಬಂದೀತೇ ಎಂದರೆ ಅದೂ ಉಹೂಂ. ಆದ್ದರಿಂದ ಫೇಬರ್ ಬೇರೆ ಯಾವ ವಾಸನೆಯೂ ಬರದಂತೆ ಬಲವಾದ ಸುಗಂಧದಿಂದ ಆ ಕೊಠಡಿಯನ್ನು ತುಂಬಿಸಿ ನೋಡಿದ. ಪತಂಗಗಳು ಆಗಲೂ ಬಂದುವು. ರಾತ್ರಿಯ ಹೊತ್ತು ಬರುತ್ತಿದ್ದುದರಿಂದ ಅವುಗಳನ್ನು ಪರೀಕ್ಷಿಸುವುದು ಕಷ್ಟವಾಗುತ್ತಿತ್ತು. ಅವು ಬಹಳ ದಿನ ಬದುಕಿರುತ್ತವೆಯೇ ಅಂದರೆ ಅದೂ ಇಲ್ಲ. ಹೆಂಡತಿಯನ್ನು ಹುಡುಕಿ ಸರಿಯಾಗಿ ಮುಖ ನೋಡುವಷ್ಟರಲ್ಲೇ ಸಾಯುವ ಗಳಿಗೆ ಬಂದುಬಿಟ್ಟಿರುತ್ತದೆ. ಅವು ಏನನ್ನೂ ತಿನ್ನುವುದೇ ಇಲ್ಲ. ತಿನ್ನುವುದಕ್ಕೆ ಬಾಯಿ, ಹಲ್ಲು ಅದೆಲ್ಲ ಇದ್ದರೆ ತಾನೆ. ಪತಂಗ ಇರುವುದೇ ಮದುವೆ ಮಾಡಿಕೊಂಡು ಮೊಟ್ಟೆ ಇಡುವುದಕ್ಕೆ. ಇನ್ನೇನೂ ಕೇಳಬೇಡಿ.

ಆದ್ದರಿಂದ ಫೇಬರ್, ಬೆಳಗಿನ ಹೊತ್ತು ಹಾರುವ ಅಂಥದೇ ಇನ್ನೊಂದು ಪತಂಗವನ್ನು ಹಿಡಿದು ಅದರಿಂದಲಾದರೂ ತನಗೆ ಬೇಕಾದ

ವಿಷಯಗಳು ತಿಳಿಯುತ್ತವೋ ಏನೋ ಎಂದುಕೊಂಡ.

ಫೇಬರ್ ಅಂಥ ಚಿಟ್ಟೆಗಳ ಗುಂಪಿನ ವಿಷಯವನ್ನು ಪುಸ್ತಕಗಳಲ್ಲಿ ಓದಿದ್ದ. ಅವುಗಳ ಹೆಣ್ಣು ಎಂಥ ಗದ್ದಲ ತುಂಬಿದ ಮಹಾಪಟ್ಟಣದಲ್ಲಿಯೇ ಹುಟ್ಟಿರಲಿ, ಆ ವೀರಯೋಧರು, ಎಷ್ಟು ದೂರದ ಕಾಡಿನಿಂದಲಾದರೂ ಸರಿಯೆ ಬರುತ್ತಿದ್ದರು. ಫೇಬರ್ ಅದುವರೆಗೆ ಅವುಗಳನ್ನು ನೋಡಿರಲಿಲ್ಲ. ಒಂದು ದಿನ ಅವರ ಮನೆಗೆ ತರಕಾರಿಯನ್ನು ಕೊಡಲು ಏಳು ವರ್ಷದ ಹುಡುಗನೊಬ್ಬ ಬಂದ. ತುಂಬ ಚಟುವಟಿಕೆಯ ಹುಡುಗ. ದಿನವೂ ಅವನ ತಾಯಿ ಬರುತ್ತಿದ್ದಳು. ಅವತ್ತು ಅವನನ್ನು ಕಳಿಸಿದ್ದಳು. ವ್ಯಾಪಾರವೆಲ್ಲ ಮುಗಿದ ಮೇಲೆ ಫೇಬರನ ಕೈಗೆ ಅವನು ಮತ್ತೇನನ್ನೋ ತೆಗೆದುಕೊಟ್ಟ. "ಇದನ್ನು ತೆಗೆದುಕೊಳ್ಳುತ್ತೀರಾ?" ಹೆದರುತ್ತಲೇ ಕೇಳಿದ. ಅದು ಅವನಿಗೆ ಹಿಂದಿನ ದಿನ ಮೊಲಗಳಿಗೋಸ್ಕರ ಹುಲ್ಲು ಕತ್ತರಿಸುತ್ತಿದ್ದಾಗ ಸಿಕ್ಕಿತಂತೆ.

ಅದಕ್ಕೆ ಫೇಬರ್ "ಓಹೋ ಧಾರಾಳವಾಗಿ. ಇಂಥದು ಇನ್ನೂ ಸಿಕ್ಕಿದರೆ ತರುತ್ತೀಯಾ? ಈ ಭಾನುವಾರ ನನ್ನ ಕುದುರೆಯ ಮರಿಯ ಮೇಲೆ ನೀನು ಸವಾರಿ ಮಾಡುವೆಯಂತೆ. ತೆಗೆದುಕೊ, ಈ ಒಂದಾಣೆಯನ್ನು. ನಿನ್ನ ತರಕಾರಿಯ ದುಡ್ಡಿನ ಜೊತೆ ಅದನ್ನು ಸೇರಿಸಿಬಿಡಬೇಡ." ಎಂದ.

ಫೇಬರನಿಗೆ ಆ ದಿನ ಸಿಕ್ಕಿದುದು ಎಂಥ ನಿಧಿ ಗೊತ್ತೇ ನಿಮಗೆ? ಅಂಥಹ ಚಿಟ್ಟೆ ಫೇಬರನ ಊರಿನ ಸುತ್ತಮುತ್ತ ಅಪರೂಪ. ಬಹಳ ಅಪರೂಪ. ಫೇಬರ್ ಸೆರಿನಾನ್‌ನಲ್ಲಿ ಇಪ್ಪತ್ತು ವರ್ಷಗಳಿಂದ ಇದ್ದರೂ ಒಂದು ಬಾರಿಯೂ ಅದು ಕಣ್ಣಿಗೆ ಬಿದ್ದಿರಲಿಲ್ಲ. ಫೇಬರನ ಆ ಪುಟ್ಟ ಸಹಾಯಕನ ಕೈಗೂ ಅಂತಹ ಇನ್ನೊಂದು ಗೂಡು ಸಿಗಲಿಲ್ಲ. ಮೂರು ವರ್ಷಗಳ ಕಾಲ ಫೇಬರ್, ಅವನ ಮಕ್ಕಳು, ಸ್ನೇಹಿತರು, ನೆರೆಹೊರೆಯವರು ಎಲ್ಲರೂ ಸೇರಿ ಇನ್ನಿಲ್ಲದಷ್ಟು ಹುಡುಕಿದರೂ, ಕಣ್ಣಿಗೆ ಬಿದ್ದಿದ್ದರೆ ಅದೇ ಸರಿ.

ಫೇಬರ್ ಎಂದುಕೊಂಡಂತೆ ಅದು ಆ ಪ್ರಖ್ಯಾತವಾದ ಚಿಟ್ಟೆಯದೇ ಗೂಡು. ಆಗಸ್ಟ್ ಇಪ್ಪತ್ತನೆಯ ತಾರೀಖು ಅದರಿಂದ ಒಬ್ಬ ರಾಜಕುಮಾರಿ ಹೊರಬಂದಳು. ತಂತಿಯ ಬಲೆಯಲ್ಲಿ ಸೆರೆಯಾದಳು. ಅವತ್ತಾಗಲೀ,

ಮೂರನೆಯ ದಿನವಾಗಲೀ ಹೇಳಿಕೊಳ್ಳುವಂಥಾದ್ದೇನೂ ನಡೆಯಲಿಲ್ಲ. ಕಿಟಕಿಯ ಮೂಲಕ ಹರಿದುಬರುತ್ತಿದ್ದ ಮೃದುವಾದ ಬಿಸಿಲಿನಲ್ಲಿ ಆ ಬಂದಿ ಅಳ್ಳಾಡದೆ ನಿಂತಿದ್ದಳು. ರೆಕ್ಕೆಗಳು ನಿಶ್ಚಲವಾಗಿದ್ದುವು. ಮೂರನೆಯ ದಿನದವೇಳೆಗೆ ವಧು ಸಿದ್ಧಳಾಗಿದ್ದಳು. ಉತ್ಸವ ಆರಂಭವಾಯಿತು. ಆ ದಿನ ಫೇಬರ್ ಕೈತೋಟದಲ್ಲಿ ಶತಪಥ ಹಾಕುತ್ತಿದ್ದ. ಇಷ್ಟು ದಿನವಾದರೂ ಆ ಪತಂಗಗಳ ಹಿಂಡು ಬರಲೇ ಇಲ್ಲವಲ್ಲ. ಈ ಸಲ ಬರುವುದೇ ಇಲ್ಲ ವೇನೋ ಎಂದು ಅವನಿಗೆ ಯೋಚನೆಯಾಗಿತ್ತು. ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಆ ರೂಮಿನ ಕಿಟಕಿಯಲ್ಲಿ ಸೂರ್ಯನ ಪ್ರಕಾಶದಲ್ಲಿ ಒಂದು ಹಿಂಡು ಚಿಟ್ಟೆಗಳು ಒಂದನ್ನೊಂದು ಸುತ್ತುತ್ತಾ ಆಡುತ್ತಿದ್ದುವು. 'ಕೊನೆಗೂ ಬಂದರು ಆ ಪ್ರಣಯಿಗಳು' ಎಂದುಕೊಂಡು ಒಳಕ್ಕೆ ಓಡಿ ನೋಡಿದಾಗ,




ನವಿಲುಗಣ್ಣಿನ ಪತಂಗಗಳು ಹಾರಾಡುತ್ತಿವೆ.

ಮತ್ತೆ ಅದೇ ಅದ್ಭುತವಾದ ದೃಶ್ಯ. ಆ ವೀರಯೋಧರು ರೂಮಿನೊಳಗೆಲ್ಲ ಮೋಡ ಕವಿದಂತೆ ತುಂಬಿಕೊಂಡಿದ್ದರು. ಆ ಗದ್ದಲದಲ್ಲಿ ಏನಿಲ್ಲವೆಂದರೂ ಅರವತ್ತು ಚಿಟ್ಟೆಗಳು ಸೇರಿದಂತಿತ್ತು.

ಈ ಸಲ ಬೆಳಕಿರುವುದರಿಂದ ಅವುಗಳ ವಿಷಯ ಪೂರ ತಿಳಿದುಕೊಳ್ಳಬೇಕು ಎಂದುಕೊಂಡ.

ಮೊದಲನೆಯ ಸಲ ಆ ಪತಂಗವನ್ನು ಸರಿಯಾಗಿ ಪರೀಕ್ಷೆ ಮಾಡುವುದಕ್ಕೇ ಆಗಿರಲಿಲ್ಲ. ಆ ಸಲ ಯಾವುದೋ ಅಡ್ಡಜ್ಞಾನದಲ್ಲಿ ಫೇಬರ್ ಆ ಪತಂಗವನ್ನು ಒಂದು ಪುಟ್ಟ ಒಂಟಿಹುಳುವಿನ ಜೊತೆ ಇಟ್ಟುಬಿಟ್ಟಿದ್ದ. ಆ ತಾಟಗಿತ್ತಿ ತಾರಾದೇವಿ ಈ ದೈತ್ಯಪತಂಗವನ್ನು ತಿಂದೇಬಿಟ್ಟಿದ್ದಳು."

"ಒಂಟಿಹುಳು ಅಂದರೆ? ಅದು ಹೇಗಿರುತ್ತೆ?" ಕೇಳಿದ ಸೀನು.




ಒಂಟಿ ಹುಳು

"ಅದನ್ನು ನೀವೆಲ್ಲ ನೋಡೇ ಇರಬೇಕು. ಹಸಿರುಹುಲ್ಲಿನ ಮಧ್ಯೆ ಹಸಿರಾಗಿ ಕುಳಿತಿರುತ್ತೆ. ಅದಕ್ಕೆ 'ಸೂರ್ಯನ ಕುದುರೆ' ಎಂದೂ ಹೆಸರು.

ಅದು ಯಾವಾಗಲೂ ಹನುಮಂತರಾಯನ ಹಾಗೆ ಕೈಮುಗಿದುಕೊಂಡೇ ಇರುತ್ತದೆ....ಆದರೆ ಬಕಾಸುರ ಅಷ್ಟೆ."

"ಹೌದು ಹೌದು. ದೊಡ್ಡ ದೊಡ್ಡ ಕಡ್ಡಿಯಂಥ ಕೈಕಾಲುಗಳು ಅದಕ್ಕೆ" ಎಂದ ಬಾಲು.

"ಹೌದು ಅದೇ....ಆಮೇಲೆ ಇನ್ನೊಂದು ಚಿಟ್ಟೆ ಸಿಗುವುದಕ್ಕೆ ಮೂರು ವರ್ಷ ಹಿಡಿಯಿತು. ಪತಂಗಿನಿ ಹುಟ್ಟಿದ ಮೂರು ದಿನಗಳ ನಂತರ ಬರುತ್ತಿದ್ದರು ಅವಳ ನೆಂಟರಿಷ್ಟರು."

"ಫೇಬರ್ ಪರೀಕ್ಷೆ ಮಾಡಿದ. ಆ ಚಿಟ್ಟೆಯನ್ನು ಒಂದು ಕಿಂಡಿಯೂ ಇಲ್ಲದಂಥ ಪೆಟ್ಟಿಗೆಯಲ್ಲಿಟ್ಟಾಗ ಆ ನೆಂಟರ ಗುಂಪು ಬರುತ್ತಲೇ ಇರಲಿಲ್ಲ. ಬೇರೆ ಇನ್ನೆಲ್ಲಿ ಬೇಕಾದರೂ ಇಡಲಿ, ಸ್ವಲ್ಪ ಗಾಳಿಯಾಡುವಂಥ ಪ್ರದೇಶವಾದರೂ ಸರಿ—ಡ್ರಾಯರಿನಲ್ಲಿಟ್ಟು ಮುಚ್ಚಿದಾಗಲೂ ಕೂಡ—ಅವು ಬಂದು ಬಿಡುತ್ತಿದ್ದುವು.

ಒಂದು ದಿನ ಮಧ್ಯಾಹ್ನ ಅವಕ್ಕೆ ಕಣ್ಣು ಎಷ್ಟರಮಟ್ಟಿಗೆ ಕಾಣುತ್ತದೆ ನೋಡೋಣ ಎಂದುಕೊಂಡು ಫೇಬರ್ ಆ ಹೆಣ್ಣು ಪತಂಗವನ್ನು ಒಣಗಿದ ಓಕ್ ಎಲೆಗಳ ಮೇಲೆ ಕೂಡಿಸಿ, ದೊಡ್ಡ ಗಾಜಿನ ಗುಮ್ಮಟವನ್ನು ಅದರ ಮೇಲೆ ಕವಿಚಿ, ತೆರೆದ ಕಿಟಕಿಯ ಮುಂದೆ ಅದು ಇರುವ ಮೇಜನ್ನು ಇಟ್ಟ. ಆ ಯುವಕರೆಲ್ಲ ಕಿಟಕಿಯಿಂದ ಬರುವಾಗ, ಗಾಜಿನೊಳಗಿನಿಂದ ಸೊಗಸಾಗಿ ಕಾಣುತ್ತಿರುವ ಈ ಹುಡುಗಿಯನ್ನು ನೋಡಲೇಬೇಕು....ಹಾಗಿಟ್ಟ. ಆ ಹುಡುಗಿ ರಾತ್ರಿಯೆಲ್ಲ ಕುಳಿತು ಕಳೆದಿದ್ದ ಮರಳು ತುಂಬಿದ ತಟ್ಟೆಯನ್ನೂ ತಂತಿಯ ಬಲೆಯನ್ನೂ ರೂಮಿನ ಕತ್ತಲೆಯ ಮೂಲೆಗೆ ತಳ್ಳಿದ.

ಆದರೆ ನಡೆದಿದ್ದೆಲ್ಲಾ ತಲೆಕೆಳಗು. ಬಂದವರಲ್ಲಿ ಒಬ್ಬರಾದರೂ ಗಾಜಿನ ಗುಮ್ಮಟದ ಕಡೆ ತಿರುಗಲಿಲ್ಲ. ಕಣ್ಣೆದುರಿಗೇ ಬೆಳಕಿನಲ್ಲಿ ಗಾಜಿನ ಮನೆಯಲ್ಲಿ ಕುಳಿತ ಆ ಪತಂಗವನ್ನು ಬಿಟ್ಟು, ಎಲ್ಲರೂ ಹೋಗಿ ಕತ್ತಲ ಮೂಲೆಯಲ್ಲಿ, ತಂತಿಯ ಬಲೆಯ ಹತ್ತಿರ ಇದ್ದ ಮರಳು ತುಂಬಿದ ತಟ್ಟೆಯ ಹತ್ತಿರ ಸುತ್ತುತ್ತಿವೆ. ಇಡೀ ಮಧ್ಯಾಹ್ನ ಅವು ತಮ್ಮ ಪ್ರೀತಿಯನ್ನು ಮರಳಿನ ತಟ್ಟೆಗೂ ತಂತಿಯ ಬಲೆಗೂ ಹೇಳಿಕೊಂಡು ಸುತ್ತಿಯೇ ಸುತ್ತಿದವು.

ಈ ರಾಜಕುಮಾರಿ ಆಕಾಶ ನೋಡುತ್ತಾ ಒಂಟಿಯಾಗಿ ಕಿಟಕಿಯ ಬಳಿ ಕುಳಿತೇ ಇದ್ದಳು.

ಫೇಬರ್ ಅವಳ ಪ್ರೇಮಿಗಳನ್ನು ವಿಧವಿಧವಾಗಿ ಮೋಸಮಾಡುತ್ತಿದ್ದ. ಹೆಣ್ಣು ಪತಂಗವನ್ನು ಹತ್ತಿಯ ಮೇಲೆ ಸಾಕಷ್ಟು ಹೊತ್ತು ಕೂಡಿಸಿ, ಆ ಮೇಲೆ ಆ ಬರಿಯ ಹತ್ತಿಯನ್ನು ಸಣ್ಣಬಾಯಿಯಿರುವ ಜಾಡಿಯಲ್ಲಿಟ್ಟುಬಿಡುತ್ತಿದ್ದ. ಆ ಚಿಟ್ಟೆಗಳೆಲ್ಲ ಹೋಗಿ ಆ ಜಾಡಿಯಲ್ಲಿ ನುಗ್ಗಿ ಪ್ರೇಮಗೀತೆ ಹಾಡುತ್ತಿದ್ದುವು. ಹೊರಕ್ಕೆ ಬರಲಾಗದೆ ಪರದಾಡುತ್ತಿದ್ದುವು. ಹೆಣ್ಣುಚಿಟ್ಟೆ ಕುಳಿತಿದ್ದ ತರಗೆಲೆಗಳಲ್ಲಿ ಒಂದನ್ನು ಆರಿಸಿ ಕುರ್ಚಿಯ ಮೇಲಿಟ್ಟಾಗ ಆ ವೀರರ ಗುಂಪು ಅಲ್ಲಿಗೆ ಧಾವಿಸುತ್ತಿತ್ತು. ತಮ್ಮ ನೂಕುನುಗ್ಗಲಿನಲ್ಲಿ ತರಗೆಲೆಯನ್ನು ನೆಲಕ್ಕೆ ತಳ್ಳಿ, ತಾವೂ ಅದನ್ನು ಹಿಂಬಾಲಿಸುತ್ತಿದ್ದುವು. ಎಲ್ಲರಿಗೂ ಕಾಣುವಂತೆ ಗಾಜಿನಲ್ಲಿ ಕುಳಿತ ಪತಂಗಿನಿ ಒಂಟಿಯಾಗೇ ಕಾಲ ಕಳೆಯುತ್ತಿದ್ದಳು."

"ಅಷ್ಟೊಂದು ಕಣ್ಣಿದ್ದೂ ದಂಡ" ಎಂದಳು ವಸಂತಿ.

"ಆಮೇಲೆ ?" ಕೇಳಿದ ಸೀನು.

"ಆಮೇಲೆ ಮೊಟ್ಟೆ. ಮೊಟ್ಟೆ ಒಡೆದು ಕಂಬಳಿ ಹುಳು. ಆಮೇಲೆ ಅದರ ಕೋಶಾವಸ್ಥೆ. ಆಮೇಲೆ ಚಿಟ್ಟೆ. ಮತ್ತೆ ಅದೇ ಕಥೆ ಪುನಃಪುನಃ."

# ಪೈನ್ ಮರದ ದಿಬ್ಬಣಿಗರು

" ನೋಡಕ್ಕ, ಇವತ್ತು ವಸಂತಿ ನುಗ್ಗೆ ಮರದ ಮೇಲೆ ಸಾಲುಸಾಲಾಗಿ ಮಲಗಿದ್ದ ಕಂಬಳಿ ಹುಳುಗಳನ್ನೆಲ್ಲ ಬಚ್ಚಲಿಗೆ ಕೆಡವಿ ಬಿಟ್ಟಳು. ಪಾಪ! ಅಲ್ಲೇನು ಮಾಡುತ್ತ ಇದ್ದುವೋ ಏನೊ? ಫೇಬರ್ ಅವುಗಳ ಕಥೆ ಏನು ಹೇಳಲಿಲ್ಲವೆ?" ಕೇಳಿದ ಸೀನು.

" ಹೇಳಿದ್ದಾನೆ. ಅವು ಪ್ರತಿವರ್ಷವೂ ಅವನ ಪೈನ್ ಮರಗಳಲ್ಲಿ ಬಿಡಾರ ಹೂಡಿ, ತಮ್ಮ ಸುತ್ತ ದೊಡ್ಡ ದೊಡ್ಡ ಚೀಲಗಳನ್ನು ಹೆಣೆದುಕೊಳ್ಳುತ್ತಿದ್ದುವಂತೆ."

" ಆಮೇಲೆ" ಕೇಳಿದಳು ವಸಂತಿ.

" ಆಮೇಲೇನು, ಅದರ ಎಲೆಯನ್ನೆಲ್ಲ ತಿಂದು ಮರವನ್ನೇ ಬೋಳು ಮಾಡುತ್ತಿದ್ದುವು. ನೋಡಿದವರು ಈ ಮರಕ್ಕೆ ಬೆಂಕಿ ಬಿದ್ದಿತ್ತೋ ಏನೋ ಎಂದುಕೊಳ್ಳಬೇಕು. ಆದ್ದರಿಂದಲೇ ಫೇಬರ್ ಒಂದು ಸೀಳಾದ ಬಿದಿರು ಕಡ್ಡಿಯಿಂದ ಪ್ರತಿ ಚಳಿಗಾಲದಲ್ಲೂ ಸಾಧ್ಯವಾದಷ್ಟು ಅವುಗಳ ಗೂಡನ್ನು ಕಿತ್ತುಹಾಕುತ್ತಿದ್ದನಂತೆ. ಆ ಹೊಟ್ಟೆ ಬಾಕರ ಕಾಟದಲ್ಲಿ ಅವನ ಮರ್ಮರಿಸುವ ಪೈನ್ ಮರಕ್ಕೆ ಸೊಲ್ಲೇ ಅಡಗಿ ಹೋಗುತ್ತಿತ್ತು. ಪೈನ್ ಮರದ ಎಲೆಗಳು ಹಾಗೆರಡು ಹೀಗೆರಡು ಜೋಡಿಸಿದಂತೆ ಬೆಳೆಯುತ್ತವೆ. ಅವು ಸೇರುವ ಕಡೆ ರೇಸಿಮೆಯ ಗವಸು ಹಾಕಿದಂತಿದ್ದು, ಅದನ್ನು ಗುಲಾಬಿ ಬಣ್ಣ ಆವರಿಸಿರುತ್ತದೆ. ಅದರ ಮೇಲೆ ಹೆಂಚು ಹೊದಿಸಿದಂತೆ ಪಾರದರ್ಶಕವಾದ ಪೊರೆ ಇರುತ್ತದೆ. ಅದು ಮುಟ್ಟುವುದಕ್ಕೆ ಮಕಮಲ್ಲಿನಷ್ಟು ಮೃದುವಾಗಿರುತ್ತದೆ. ಅಂತಹ ಪೊರೆ ಪೈನ್‌ಮರದ ಈ ರೇಷ್ಮೆಯ ಹುಳುಗಳಿಗೆ, ಅವುಗಳ ಮೊಟ್ಟೆಗಳಿಗೆ, ಸೊಗಸಾದ ಆಶ್ರಯಸ್ಥಾನ. ಅಂತಹ ಮನೆಯ ಮಾಡಿನಿಂದ ಒಂದು ಹನಿಮಳೆಯಾಗಲೀ ಹಿಮವಾಗಲೀ ಸೋರುತ್ತದೆಯೇ? ಇಲ್ಲ. ತನ್ನ ಮೊಟ್ಟೆಗಳನ್ನು ಜೋಪಾನ ಮಾಡುವುದಕ್ಕಾಗಿ ತಾಯಿ ಆ ಪೊರೆಯನ್ನು ತನ್ನ ದೇಹದ ಧೂಳಿನಿಂದಲೇ ತಯಾರಿಸಿದೆ."

" ದೇಹದ ಧೂಳು ಅಂದರೆ?" ಬಾಲುವಿನ ಪ್ರಶ್ನೆ.

"ಅಂದರೆ, ಅದರ ಚರ್ಮದ ಮೇಲ್ಭಾಗ ಒಂದು ತರಹ ನಯವಾದ ಧೂಳಿನಿಂದ ಆವೃತವಾಗಿರುತ್ತದೆ. ಅದನ್ನುಪಯೋಗಿಸಿ ತನ್ನ ಮಕ್ಕಳಿಗೆ ದೊಡ್ಡ ಪೊರೆಯ ಕಂಬಳಿ ತಯಾರಿಸಿತು ಅಂತ ಅರ್ಥ.

ಫೇಬರ್ ತನ್ನ ಚಿಮುಟದಿಂದ ಅದರ ಪೊರೆಯನ್ನು ಎತ್ತಿ ನೋಡಿದಾಗ ಎನಾಮಲ್ ಮುತ್ತುಗಳಂತೆ ಕಾಣುವ, ಒತ್ತಾಗಿ ಜೋಡಿಸಿದ್ದ ಒಂಭತ್ತು ಸಾಲು ಮೊಟ್ಟೆಗಳು ಕಣ್ಣಿಗೆ ಬಿದ್ದುವು. ಒಂದು ಸಾಲಿನಲ್ಲಿ ಸರಿಯಾಗಿ ಮೂವತ್ತೈದು ಮೊಟ್ಟೆಗಳು. ಒಂಭತ್ತು ಸಾಲೂ ಪರಸ್ಪರ ಸಮಾನಾಂತರ ನಾಗಿ, ಸಮವಾಗಿ, ಇದ್ದುವು. ಅಂದರೆ ಅಲ್ಲಿಗೆ ಮುನ್ನೂರ ಹದಿನೈದು ಮೊಟ್ಟೆಗಳು. ಏನು ಭರ್ಜರಿ ಸಂಸಾರ!

ಚಿಕ್ಕವರಾಗಲಿ, ದೊಡ್ಡವರಾಗಲಿ, ವಿದ್ವಾಂಸರಾಗಲಿ, ಅಜ್ಞಾನಿಗಳಾಗಲಿ ರೇಷ್ಮೆ ಹುಳದ ಮೊಟ್ಟೆಯ ಆ ಗೊಂಚಲನ್ನು ನೋಡಿ ಬೆರಗಾಗಲೇ ಬೇಕು. ಅಷ್ಟು ಚಂದ ಅದು. ನಾವು ಆಶ್ಚರ್ಯ ಪಡಬೇಕಾದದ್ದು ಆ ಎನಾಮಲ್ ಮುತ್ತಿನಂತಹ ಮೊಟ್ಟೆಗಳನ್ನು ನೋಡಿ ಅಲ್ಲ. ಅವುಗಳನ್ನು ಇಟ್ಟವನಾದರಿಗೆ. ಅಷ್ಟು ನಿರ್ದಿಷ್ಟನಾಗಿ, ರೇಖಾಗಣಿತವನ್ನು ಅರಿತಂತೆ ಅದು ಇಟ್ಟಿತಲ್ಲ ಹೇಗೆ?

ಬುದ್ಧಿ ಇಲ್ಲದ ಆ ಕ್ಷಣಿಕ ಜೀವಿಯ ಕಾರ್ಯವನ್ನು ಯಾವ ಓರಣ ಪ್ರಿಯತೆಯ ನಿಯಮಗಳು ಆಳುತ್ತಿವೆಯೋ, ಯಾರು ಬಲ್ಲರು?

ಮುಂದೆ ಫೇಬರ್ ಎನಾಮಲ್ ಮುತ್ತುಗಳಂತಹ ಮೊಟ್ಟೆಗಳಿಂದ ಹೊರಟ ತುಣುಕು ಜೀವಿಯ ವಿಚಿತ್ರ ಚರಿತ್ರೆಯನ್ನು ಹೇಳುತ್ತಾನೆ. ತನ್ನ ದೇಹಕ್ಕಿಂತ ಎರಡರಷ್ಟು ದೊಡ್ಡ ತಲೆಯುಳ್ಳ ಕಂಬಳಿಹುಳ ಮೊದಲು ಬರುತ್ತದೆ. ಪೈನ್‌ಮರದ ಗಟ್ಟಿಯಾದ ಮುಳ್ಳುಗಳನ್ನು ಅಗೆದು ಪೂರೈಸಲು ಸಾಧ್ಯವಾಗುವಂತೆ ಅದರ ಬಾಯಿ ಬಲವಾಗಿರುತ್ತದೆ. ಹುಟ್ಟಿದ ಒಂದೇ ಘಂಟೆಯ ನಂತರ ಅದು ಮೆರವಣಿಗೆಯಲ್ಲಿ ಹೊರಟಂತೆ ನಡೆಯಲಾರಂಭಿಸುತ್ತದೆ. ಜೊತೆಗೆ ತನಗೆ ಜುಗುಪ್ಸೆ ಉಂಟುಮಾಡುವ ಆ ಸೂರ್ಯನಿಂದ ಮರೆಮಾಡಿಕೊಳ್ಳುವುದಕ್ಕಾಗಿ ಒಂದು ಗೂಡನ್ನು ನೇಯ್ದುಕೊಳ್ಳಲಾರಂಭಿಸುತ್ತದೆ. ಬೆಳೆ ಬೆಳೆದ ಹಾಗೆಲ್ಲ ಮರವನ್ನು ಹತ್ತುತ್ತಾ ಒಂದಕ್ಕಿಂತ ಒಂದು ದೊಡ್ಡ ಗೂಡುಗಳನ್ನು ನೇಯ್ದುಕೊಳ್ಳುತ್ತಾ ಹೋಗುತ್ತದೆ. ತನ್ನ

ಗೂಡುಗಳನ್ನು ಪೈನ್‌ಮರದ ಮುಳ್ಳುಗಳ ಸುತ್ತ ನೇಯ್ದುಕೊಂಡ ಆ ಪುಟ್ಟ ಯಜಮಾನ ಅದರೊಳಗೆ ಕುಳಿತು ಆ ಆಧಾರಸ್ತಂಭವನ್ನೇ ತಿಂದುಬಿಡುತ್ತದೆ. ಹಾಗಾಗಿ ಆಧಾರಸ್ತಂಭವೇ ಇಲ್ಲದೆ ಆ ಗೂಡು ಗಾಳಿ ಬೀಸಿದಾಗ ಹಾರಿಯೇ ಹೋಗುತ್ತದೆ. ಆ ಸಣ್ಣ ಯಜಮಾನ ಇನ್ನೂ ಸ್ವಲ್ಪ ಮೇಲಕ್ಕೆ ಹತ್ತಿ ಇನ್ನೊಂದು ಗೂಡು ನೇಯುತ್ತದೆ. ಅಲ್ಲೂ ಅದೇ ಕಥೆ.

ಚಳಿಗಾಲ ಬರುತ್ತಿದ್ದ ಹಾಗೇ ಕಂಬಳಿ ಹುಳುಗಳು ಪೈನ್ ಮರದಲ್ಲಿ ದೊಡ್ಡ ಬಲವಾದ ನೇತಾಡುವ ಗೂಡುಗಳನ್ನು ನೇಯ್ದುಕೊಳ್ಳುತ್ತವೆ. ಫೇಬರ್ ಅವುಗಳ ಸಹಜ ಪ್ರವೃತ್ತಿಯನ್ನು ಕುರಿತು ಆಶ್ಚರ್ಯಪಡುತ್ತಾನೆ. ಚಳಿ ಎಂದರೇನೆಂದೇ ತಿಳಿಯದ ಅವು ಶರತ್ಕಾಲವೆಲ್ಲ ಕುಳಿತು ಬೆಚ್ಚಗಿನ ಗೂಡನ್ನು ನೇಯ್ದು ಸಿದ್ಧಮಾಡಿಕೊಳುತ್ತವಲ್ಲ ಹೇಗೆ?....ಅವು ಹುಟ್ಟುವುದಕ್ಕೂ ಮೊದಲೇ ಸತ್ತುಹೋದ ಅವುಗಳ ತಾಯಿಯಂತೂ ಅದನ್ನು ಕಲಿಸಿರಲಾರಳು. ಫೇಬರ್ ಹೇಳುತ್ತಾನೆ. ಅವು ಸೊಗಸಾದ ವಾಯುಭಾರಮಾಪಕಗಳಂತೆ."

"ಹಾಗಂದರೆ?" ಕೇಳಿದ ಸೀನು.

"ನಾ ಹೇಳ್ತೇನೆ. ವಾಯುಭಾರಮಾಪಕ ಯಂತ್ರ ಅಂದರೆ ಗಾಳಿಯಲ್ಲಿರುವ ಉಷ್ಣತೆ ಮುಂತಾದುವನ್ನು ತೋರಿಸುವ ಯಂತ್ರ. ಅದರಿಂದ ನಾವು ಮಳೆ ಬರುವ ಸಂಭವ ಇದೆಯೆ? ವಾತಾವರಣ ಹೇಗಿದೆ........ ಮುಂತಾದ್ದನ್ನೆಲ್ಲ ತಿಳಿದುಕೊಳ್ಳಬಹುದು" ಉತ್ತರಿಸಿದ ಬಾಲು.

"ಹವಾ ವರ್ತಮಾನವನ್ನು ಅವುಗಳ ಓಡಾಟವೇ ಸೂಚಿಸುತ್ತಿತ್ತು. ಅಲ್ಲದೆ ವರ್ತಮಾನ ಪತ್ರಿಕೆಗಳಲ್ಲಿ ಬಂದ ಹವಾ ಮುನ್ಸೂಚನೆಗೂ, ಅವು ಕೊಟ್ಟ ಸೂಚನೆಗೂ ತಾಳೆಯಾಗುತ್ತಿತ್ತು.

ಮುಂದೆ ಅವು ಚಳಿಗಾಲದಲ್ಲಿ ಹವಾ ಚೆನ್ನಾಗಿದ್ದ ದಿನ ತಮ್ಮ ಗೂಡುಗಳನ್ನು ಬಿಟ್ಟು ಯಾವುದಾದರೂ ಒಂದರ ನಾಯಕತ್ವದಲ್ಲಿ ಮೆರವಣಿಗೆ ಹೊರಡುತ್ತಿದ್ದುವು. ಹಿಂದಿನದರ ಬಾಯಿ ಮುಂದಿನದರ ಬಾಲಕ್ಕೆ ತಾಗುವಂತೆ ಅವು ಒಂದೇ ಸಾಲಿನಲ್ಲಿ ನಡೆಯುತ್ತಿದ್ದುವು. ಕ್ರಮೇಣ ಈ ದಿಬ್ಬಣ ಮರವಿಳಿದು ಮುಂದೆ ಸಾಗುತ್ತಿತ್ತು. ಪ್ರತಿಯೊಂದು ಕಂಬಳಿ ಹುಳುವೂ ತನ್ನ ಹಿಂದಿನದಕ್ಕೆ ದಾರಿ ತೋರಿಸಲು ಒಂದು ರೇಷ್ಮೆಯ ಎಳೆ

ಯನ್ನು ಬಿಟ್ಟು ಹೋಗುತ್ತಿತ್ತು. ಹೀಗೇ ಸೇರಿ ಕೊನೆ ಕೊನೆಗೆ ಒಂದು ಅಗಲವಾದ ರೇಷ್ಮೆ ಎಳೆಯ ರಾಜಬೀದಿಯೇ ನಿರ್ಮಾಣವಾಗುತ್ತಿತ್ತು. ಅದರ ಮೂಲಕವಾಗಿ ಆ ಕಂಬಳಿ ಹುಳುಗಳು ಎಂತಹ ಕಾರ್ಗತ್ತಲೆಯ ರಾತ್ರಿಯಲ್ಲೂ ಹಿಂದಿರುಗಿ ಗೂಡು ಸೇರುತ್ತಿದ್ದುವು.

ಒಂದು ಸಲ ಅವುಗಳ ಬುದ್ಧಿವಂತಿಕೆಯನ್ನು ಪರೀಕ್ಷಿಸುವುದಕ್ಕಾಗಿ ಫೇಬರ್ ಆ ರೇಷ್ಮೆ ಎಳೆಗಳ ರಾಜಬೀದಿಯನ್ನು ವೃತ್ತಾಕಾರವಾಗಿ ಇಡ ಬೇಕು ಎಂದುಕೊಂಡ. ಅದಕ್ಕೊಂದು ಸುಸಮಯ ಒದಗಿತು. ಫೇಬರನ ಅದೃಷ್ಟಕ್ಕೆ ಸರಿಯಾಗಿ ಒಂದು ದಿನ ಆ ಮೆರವಣಿಗೆ ಅವನ ತೋಟದಲ್ಲಿದ್ದ ದೊಡ್ಡ ಮಣ್ಣಿನ ಕುಂಡವನ್ನು ಹತ್ತಲಾರಂಭಿಸಿತು. ಅದರ ಅಂಚನ್ನು ಮುಟ್ಟಿದ ಮೇಲೆ ಅವು ಅದಕ್ಕೆ ಪ್ರದಕ್ಷಿಣೆ ಹಾಕಲು ಮನಸ್ಸು ಮಾಡಿದವು. ಆಗ ಫೇಬರ್ ಇನ್ನೂ ಕೆಳಗಿನಿಂದ ಹತ್ತುತ್ತಲೇ ಇದ್ದ ಕಂಬಳಿಹುಳುಗಳನ್ನು ಕೆಡವಿ ದೂರ ಮಾಡಿದ. ಒಂದು ಬ್ರಷ್ ತೆಗೆದುಕೊಂಡು ಆ ಮಣ್ಣಿನ ಕುಂಡವನ್ನು ಯಾವ ರೇಷ್ಮೆಯ ಎಳೆಯೂ ಇಲ್ಲದಂತೆ ಚೆನ್ನಾಗಿ ಒರಸಿ ಬಿಟ್ಟ. ಮೇಲಿದ್ದ ಕಂಬಳಿ ಹುಳುಗಳು ಪ್ರದಕ್ಷಿಣೆ ಹಾಕಿಯೇ ಹಾಕಿದುವು. ಊಟದ ವೇಳೆ ಬಂದಿತು....ಹೋಯಿತು. ನಿದ್ರೆಯ ವೇಳೆ ಬಂದಿತು.... ಅವು ಅಲ್ಲೇ ತೂಕಡಿಸಿ ಮಲಗಿದವು. ಮೆರವಣಿಗೆಯ ವೇಳೆ ಸಮೀಪಿಸಿತು. ಅವು ಎದ್ದು ಪುನಃ ಪ್ರದಕ್ಷಿಣೆಗೆ ತೊಡಗಿದವು. ದಿನಗಳು ಕಳೆದರೂ ಅವು ಸುತ್ತುತ್ತಲೇ ಇದ್ದುವು. ಇಪ್ಪತ್ತುನಾಲ್ಕು ಗಂಟೆಗಳಿಗೆ ಏಳು ಸಲದಂತೆ ಸುತ್ತಿದವು. ಹಸಿವಾಗಿರಲಿ, ಆಯಾಸವಾಗಿರಲಿ, ಚಳಿಯಾಗಲಿ, ಬಿಸಿಲಾ ಗಲಿ, ದಿನದಿನಕ್ಕೂ ಬೆಳೆಯುತ್ತಿರುವ ರೇಷ್ಮೆಯ ರಾಜಬೀದಿ ಇರುವಾಗ, ಆ ದಾರಿ ಸರಿಯಾಗೇ ಇರಬೇಕು. ಇಷ್ಟಕ್ಕೂ ಮುಂದೆ ನಾಯಕನಿಲ್ಲವೆ.... ಇನ್ನೇನು ಭಯ ?

ಅವುಗಳಿಗೆ ತೀರ ಆಯಾಸವಾದಾಗ ನಡೆದ ಒಂದು ದಾರಿಯ ಅಪ ಘಾತ ಅವನ್ನು ಕಾಪಾಡಿತು. ಸೋತು ಕಂಗಾಲಾಗಿ ಅವು ಮಣ್ಣಿನ ಕುಂಡದ ಕಡಿದಾದ ಮುಖದ ಮೇಲೆ ಬಿದ್ದುವು. ಅಲ್ಲಿ ನೆಲದಮೇಲೆ ಉಳಿ ದಿದ್ದ ಹಿಂದಿನ ರೇಷ್ಮೆಯ ದಾರಿಯನ್ನು ಹಿಡಿದು ಗೂಡು ಸೇರಿಕೊಂಡುವು.

ವಸಂತ ಋತುವಿನಲ್ಲಿ ಅವು ಕೊನೆಯ ಬಾರಿಗೆ ಮೆರವಣಿಗೆ ಹೊರ

ಟವು. ತಮಗೊಪ್ಪುವಂತಹ ಮಣ್ಣು ಹುಡುಕಿ ತಮಗೆ ತಾವೇ ಸಮಾಧಿಗಳನ್ನು ತೋಡಿಕೊಂಡು ಅಲ್ಲಿ ನೆರೆದುವು....ಆದರೆ ಸಾಯುವುದಕ್ಕಲ್ಲ, ನೆಲಮಾಳಿಗೆಯಲ್ಲಿ ರೂಪ ಬದಲಿಸಿ ಪೊರೆಹುಳು ಆಗುವುದಕ್ಕೋಸ್ಕರ ಅಷ್ಟೆ.

ಪೊರೆಹುಳು ಚಿಟ್ಟೆಯಾಗಿ ಪರಿವರ್ತಿತವಾಗುವ ಕಾಲ ಬಂದಾಗ, ಆ ದೊಡ್ಡ ನವುರಾದ ರೆಕ್ಕೆಗಳುಳ್ಳ ಜೀವಿ, ಹೇಗೆ ನೆಲವನ್ನೊಡೆದುಕೊಂಡು ಬರುತ್ತವೆ? ಫೇಬರ್ ಅದನ್ನು ನೋಡುವ ಆಸೆಯಿಂದ ಒಂದು ಗಾಜಿನ ಪ್ರನಾಳದಲ್ಲಿ ಈ ಕಂಬಳಿ ಹುಳುಗಳನ್ನು ಹಾಕಿ ಮಣ್ಣು ತುಂಬಿಸಿದ. ಆಗ, ಅವನು ಕಂಡ ನೋಟವೇ ಬೇರೆ. ಅವನು ನೋಡುತ್ತಿದ್ದಂತೆ ಬತ್ತಿದ, ನುಣುಪಾದ ಪೊರೆ ಹುಳುವೊಂದು ಹೊರಟಿತು. ಅದು ಚಿಟ್ಟೆಯಾಗಿರಲೇ ಇಲ್ಲ. ಪಕ್ಕಗಳಲ್ಲಿ ಅದರ ರೆಕ್ಕೆ ಮಡಿಸಿಕೊಂಡಿತ್ತು. ಸ್ಪರ್ಶಾಂಗಗಳು ಹಿಂಭಾಗಕ್ಕೆ ತಿರುಗಿ ಮಲಗಿಕೊಂಡಿದ್ದುವು. ತಲೆಗೆ ಬಲವಾದ ಅಗೆಯುವ ಸಾಧನವಿತ್ತು. ಅದು ಅದರ ಹಣೆ. ಅದು ಹಣೆಯಿಂದ ನೆಲವನ್ನು ನೂಕಿ ಒಡೆದುಕೊಂಡು ಬರುತ್ತಿತ್ತು. ನೆಲದ ಮೇಲಕ್ಕೆ ಬಂದ ಮೇಲೇ ಅದು ಚಿಟ್ಟೆಯ ರೂಪ ತಾಳಿದುದು. ಅದು ತನ್ನ ಗರಿಯಾದ ಸ್ಪರ್ಶಾಂಗಗಳನ್ನು ಕೊಡವಿ, ರೆಕ್ಕೆಗಳನ್ನು ಹರಡಿಕೊಂಡಿತು.

ಅದೇ ಅಂತಹ ಮೊಟ್ಟೆಗಳನ್ನಿಡುವುದು. ಆದರೆ ಅದು ತಯಾರಿಸಿದಂತಹ ಪೊರೆ ಅದಕ್ಕೆಲ್ಲಿ ಸಿಕ್ಕಿತು? ಫೇಬರ್ ಬಹು ಆಸಕ್ತಿಯಿಂದ ಅದನ್ನು ಪರೀಕ್ಷೆ ಮಾಡಿದ. ಅದರ ಬಾಲವನ್ನು ಉಜ್ಜಿದಾಗ ಧೂಳೆದ್ದಿತು. ಅದು ಪೊರೆಯ ಧೂಳು. ನಂತರ ಫೇಬರ್ ಸ್ವಲ್ಪವೂ ಹಿಂದೆಗೆಯದೆ, ಅವನ ಕೈಬೆರಳುಗಳೂ, ರೆಪ್ಪೆಗಳೂ ಉರಿಯಲಾರಂಭಿಸುವವರೆಗೂ ಪರೀಕ್ಷೆ ಮಾಡುತ್ತಲೇ ಇದ್ದ. ಅವನು ಊಟಮಾಡಲು ಒಳಗೆ ಹೋದಾಗ ಮನೆಯವರು ಅವನಿಗೆ ಆರೋಗ್ಯ ಕೆಟ್ಟದೆ ಎಂದುಕೊಂಡರು. ಆದರೆ ಫೇಬರ್ ಅದರ ಕಾರಣವನ್ನು ಊಹಿಸಿದ್ದ. ಗೊಬ್ಬಳಿಮುಳ್ಳು ಚುಚ್ಚಿದಂತೆ ಅವನ ಕೈಗಳು ಉರಿಯುವುದಕ್ಕೆ ಕಾರಣ ಆ ಪತಂಗವೇ. ಕಂಬಳಿ ಹುಳುಗಳಲ್ಲೂ ಅವುಗಳ ಗೂಡುಗಳಲ್ಲೂ ಕಣ್ಣಿಗೆ ಕಾಣದಂತ ವಿಷಭರಿತವಾದ ಮುಳ್ಳುಗಳಿವೆ ಎಂಬುದು ಫೇಬರನಿಗೆ ನಂತರ ತಿಳಿಯಿತು. ಕಂಬಳಿ ಹುಳದ ಗೂಡಿಗೆ ಕೈ ಹಾಕುವವರಿಗೆ ಇದು ಒಂದು ಎಚ್ಚರಿಕೆ. ಇಷ್ಟು ಆ ದಿಬ್ಬಣಿಗರ ಕಥೆ."

# ಹೆಜ್ಜೇಡದ ಕಥೆ

" ಇವತ್ತೆಂತಹ ಕಥೆ ? "

" ಇವತ್ತು ಹೆಜ್ಜೇಡನ ಕಥೆ ಹೇಳೋಣ. ಆ ಜೇಡ ಹೆಸರಿಗೆ ತಕ್ಕ ಹಾಗೆ ದೊಡ್ಡದು. ಮೈಯೆಲ್ಲ ಕಪ್ಪುಬಣ್ಣ. ದೊಡ್ಡ ದೊಡ್ಡ ಬಲಶಾಲಿಗಳಾದ ದುಂಬಿಗಳನ್ನೆಲ್ಲ ಒಂದೇ ಸಲ ಕಚ್ಚಿ ಕೊಂದು ಬಿಡುತ್ತದೆ. ಬಡಗಿ ನೊಣ ಅಂತ ಒಂದುಂಟು. ಅದನ್ನೂ ಅಷ್ಟೆ, ಈ ಜೇಡ ಒಂದು ನಿಮಿಷಕ್ಕೆ ಪೂರೈಸಿ ಬಿಡುತ್ತದೆ. ಫೇಬರ್ ಅದನ್ನು ಪರೀಕ್ಷೆ ಮಾಡುತ್ತಾ ಯೋಚಿಸುತ್ತಿದ್ದ.... ಎಲ್ಲಾ ಪ್ರಾಣಿಗಳಿಗೂ ಇದರ ಕಡಿತದಿಂದ ಸಾವು ಬರುತ್ತದೆಯೆ ? ಹಾಗೆ ಯೋಚಿಸುತ್ತ ಮನೆಯಲ್ಲಿ ಸಾಕಿದ್ದ ಪುಟ್ಟ ಗುಬ್ಬಿಯೊಂದರ ಕಾಲನ್ನು ಅದರಿಂದ ಕಚ್ಚಿಸಿದ. ಗುಬ್ಬಿ ಆಗತಾನೆ ಗರಿ ಬಲಿತು ಹಾರಲು ಸಿದ್ಧ ವಾಗಿತ್ತು. ಕಚ್ಚಿದ ಭಾಗದಲ್ಲಿ ಒಂದು ಹನಿ ರಕ್ತ ತೊಟ್ಟಿಕ್ಕಿತು. ಆ ಮೇಲೆ ಆ ಸ್ಥಳ ಕೆಂಪಾಯಿತು. ಹಕ್ಕಿಯ ಕಾಲು ಆ ಕ್ಷಣವೇ ಉಪಯೋಗಕ್ಕೆ ಬರದಂತಾಯಿತು. ಕಾಲಿನ ಬೆರಳುಗಳು ಮುದುರಿಕೊಂಡು ಬಿಟ್ಟುವು. ಹಕ್ಕಿ ಗಾಯವಾದ ಕಾಲನ್ನು ಎಳೆದುಕೊಂಡು ಮತ್ತೊಂದು ಕಾಲಿನಿಂದ ಕುಂಟುತ್ತಾ ಓಡಾಡಿತು. ಆದರೆ ನೋಡುವುದಕ್ಕೆ ಅದು ಅಷ್ಟೇನೂ ಸೋತಿರಲಿಲ್ಲ. ಎಂದಿಗಿಂತ ಹೆಚ್ಚು ಹಸಿದಂತೆ ಕಾಣುತ್ತಿತ್ತು.

ಫೇಬರನ ಹೆಣ್ಣು ಮಕ್ಕಳು ಅದಕ್ಕೆ ಹುಳು, ಹಣ್ಣು, ಬ್ರೆಡ್ಡಿನ ಚೂರುಗಳು ಮತ್ತು ಏನೇನನ್ನೋ ತಿನ್ನಿಸಿದರು. ವಿಜ್ಞಾನದ ಕುತೂಹಲಕ್ಕೆ ಬಲಿಯಾದ ಈ ಹಕ್ಕಿ ಇನ್ನೇನು ಇದನ್ನೆಲ್ಲ ತಿಂದು ನೆಟ್ಟಗಾಗುತ್ತದೆ ಎಂದು ಕೊಂಡ ಫೇಬರ್. ಮನೆಯವರೆಲ್ಲರಿಗೂ ಅದೇ ಭರವಸೆ ಇತ್ತು. ಹತ್ತು ಹನ್ನೆರಡು ಗಂಟೆಗಳು ಕಳೆದ ಮೇಲೆ ಆ ಭರವಸೆ ಇನ್ನೂ ಹೆಚ್ಚಿತು. ಏಕೆಂದರೆ ಆ ಕುಂಟು ಹಕ್ಕಿ ತುಂಬ ಹಸಿವಿನಿಂದ ಊಟ ಮಾಡಿತು. ಅವರು ತಿಂಡಿ ತರುವುದು ಸ್ವಲ್ಪ ತಡವಾದಾಗ ಅದು ತನಗೆ ಬರಬೇಕಾದ ಆಹಾರ ಕ್ಕಾಗಿ ಕೂಗಾಡಿತು. ಅದಕ್ಕೆ ಉಂಟಾಗಿದ್ದ ಪಾರ್ಶ್ವವಾಯು ಇನ್ನೇನು ವಾಸಿ ಯಾದೀತು ಎಂದುಕೊಂಡ ಫೇಬರ್.

ಆದರೆ ಮೂರನೆಯ ದಿನ ಆ ಹಕ್ಕಿ ಏನನ್ನೂ ತಿನ್ನಲೇ ಇಲ್ಲ. ಗರಿಗಳನ್ನು ಕೆದರಿಕೊಂಡು ವಿರಕ್ತನಂತೆ ಕುಳಿತ್ತಿತ್ತು. ಒಮ್ಮೊಮ್ಮೆ ಮೈಯನ್ನೆಲ್ಲ ಮುದುರಿ ಉಂಡೆ ಮಾಡಿಕೊಳ್ಳುತ್ತಿತ್ತು. ಆಗಾಗ ಅದರ ಮೈಯೆಲ್ಲ ನಡುಗುತ್ತಿತ್ತು. ಉಳಿದ ಸಮಯದಲ್ಲಿ ಅಲುಗಾಡದೆ ಬಿದ್ದಿರುತ್ತಿತ್ತು.

ಫೇಬರನ ಹೆಣ್ಣು ಮಕ್ಕಳು ಆ ಹಕ್ಕಿಯನ್ನು ತಮ್ಮ ಅಂಗೈಯಲ್ಲಿಟ್ಟು ಕೊಂಡು ತಮ್ಮ ಉಸಿರಿನಿಂದ ಅದರ ಮೈಗೆ ಶಾಖ ಕೊಡುತ್ತಿದ್ದರು. ಕೊನೆಗೆ ಹಕ್ಕಿ ನೋವಿನಿಂದ ನುಲಿಯಲಾರಂಭಿಸಿತು. ಆ ಮೇಲೆ ಎಲ್ಲ ಮುಗಿಯಿತು ಎನ್ನುವಂತೆ ಬಾಯಿತೆರೆದುಕೊಂಡು ಬಿದ್ದು ಬಿಟ್ಟಿತು.

ರಾತ್ರಿ ಊಟಕ್ಕೆ ಕುಳಿತಾಗ ಎಲ್ಲರೂ ಬೇಜಾರುಪಟ್ಟುಕೊಂಡಿದ್ದರು. ಮನೆಯವರೆಲ್ಲರೂ ಮೌನವಾಗಿಯೇ ಫೇಬರನ ಪ್ರಯೋಗವನ್ನು ಆಕ್ಷೇಪಿಸಿದರು. ಅವರಿಗೆ ಅವನು ಮಾಡಿದ ಕೆಲಸ ಬಹಳ ಕ್ರೂರವಾದದ್ದು ಎನ್ನಿಸಿತು. ಫೇಬರನಿಗೂ ದುಃಖವಾಗಿತ್ತು. ಎಷ್ಟು ಸಣ್ಣ ವಿಷಯ ತಿಳಿಯುವುದಕ್ಕೆ ಆ ಮುದ್ದಿನ ಗುಬ್ಬಚ್ಚಿ ಬಲಿಯಾಯಿತಲ್ಲ ಎಂದು ಅವನ ಮನಸ್ಸು ಬೇಸರ ಪಟ್ಟುಕೊಂಡಿತ್ತು.

ಆದರೆ ಹಾಗೆ ಮಾಡದೆ ವಿಧಿಯಿಲ್ಲ. ಅದು ಕಚ್ಚಿದರೆ ಮನುಷ್ಯರಿಗೂ ಅಪಾಯವೇ ಅಲ್ಲವೇ ಎನ್ನುವುದನ್ನು ಕಂಡುಹಿಡಿಯಬೇಕಲ್ಲ. ಆದ್ದರಿಂದ ಅಂತಹ ಪ್ರಯೋಗವನ್ನು ಒಂದು ದೊಡ್ಡ ಕಪ್ಪೆಯ ಮೇಲೂ ಮಾಡಿ ನೋಡಿದ. ಅದೂ ಕೂಡ ಸತ್ತು ಹೋಯಿತು. ಹೀಗಾಗಿ ದೊಡ್ಡ ದೊಡ್ಡ ಪ್ರಾಣಿಗಳು ಕೂಡ ಹೆಜ್ಜೇಡನಿಗೆ ಹೆದರಬೇಕಾದ್ದೇ."

"ಹಾಗಾದರೆ ಹೆಜ್ಜೇಡ ಯಾವುದಕ್ಕೂ ಹೆದರಬೇಕಾಗಿಲ್ಲವೇ ?" ಅದು ಬಾಲುವಿನ ಪ್ರಶ್ನೆ.

"ಅದಕ್ಕೂ ಶತ್ರುಗಳಿದ್ದಾರೆ. ಯಾರು ಗೊತ್ತೇನು ? ಪುಟ್ಟ ಪುಟ್ಟ ಕಣಜಗಳು. ಅಲ್ಲದೆ ಹೆಜ್ಜೇಡಗಳು ಮನುಷ್ಯರಿಗೆ ಹೆದರಲೇ ಬೇಕು ಅಂದುಕೊಳ್ಳಿ. ಫೇಬರ್ ತನ್ನ ಬದುಕಿನಲ್ಲೆಲ್ಲಾ ಒಂದೇ ಒಂದು ಸಲ, ತನ್ನ ತೋಟದಲ್ಲಿ ಪುಟ್ಟ ಅಗೆಯುವ ಕಣಜವೊಂದು ಹೆಜ್ಜೇಡನನ್ನು ಹಿಡಿದು, ಎಳೆದುಕೊಂಡು ಹೋಗುತ್ತಿದ್ದುದನ್ನು ನೋಡಿದ್ದ. ಆ ನಿರ್ಭೀತ ಕಣಜ ಈ ಭಯಂಕರ ಜೀವಿಯನ್ನು ಎಳೆದೊಯ್ಯುವ ದೃಶ್ಯ ಅದ್ಭುತವಾಗಿತ್ತು.

ಮನೆಯ ಬಾಗಿಲಿನವರೆಗೂ ಎಳೆದುಕೊಂಡು ಬಂದು, ಅದನ್ನು ಅಲ್ಲೇ ಬಿಟ್ಟು ತಾನೊಂದೇ ಒಳಕ್ಕೆ ಹೋಯಿತು. ಎಲ್ಲ ಸರಿಯಾಗಿದೆಯೇ ಅಂತ ನೋಡಿಕೊಂಡು ಬಂದು ಆಮೇಲೆ ಅದನ್ನು ಒಳಕ್ಕೆ ಎಳೆದುಕೊಂಡು ಹೋಯಿತು. ಆಮೇಲೆ ಹೊರಕ್ಕೆ ಬಂದು ಅಲ್ಲಲ್ಲಿನ ಕಸದಿಂದ ತನ್ನ ಮನೆಯ ಬಾಗಿಲನ್ನು ಮುಚ್ಚಿ ಹಾರಿಹೋಯಿತು. ಆ ಸಂದರ್ಭದಲ್ಲಿ ಕಣ ಜಮ್ಮ ಮೊಟ್ಟೆಯಿಡುತ್ತಿದ್ದಳು. ತನ್ನ ಮರಿಯ ಗೂಡಿನಲ್ಲಿ ಆಹಾರವನ್ನು ತುಂಬುತ್ತಿದ್ದಳು.

ಫೇಬರನಿಗೆ ಹೆಜ್ಜೇಡನಿಗೂ ಕಣಜನಿಗೂ ನಡೆಯುವ ಕಾಳಗವನ್ನು ನೋಡಬೇಕೆಂಬ ಆಸೆ ಇತ್ತು. ಆದರೆ ಆಗಲಿಲ್ಲ. ಬೇರೆ ಯಾವುದೋ ದೊಡ್ಡ ಜೇಡನ ಜೊತೆಯಲ್ಲಿ ಅದು ನಡೆಸಿದ ಯುದ್ಧವನ್ನು ನೋಡಿದ್ದ.

" ಹುಂ....ಹೇಗೆ ಯುದ್ಧ ಮಾಡಿದವಂತೆ ಅವು ?...." ಕೇಳಿದ ಸೀನು.

" ಮೊದಲು ಜೇಡನ ಬೇಟೆಗಾತಿ ಗೋಡೆಯನ್ನು ತಡವುತ್ತಾಳೆ. ಬಿಲ ಕಂಡು ಬಂದರೆ ಸಾಕು, ಅದರ ಸುತ್ತ ನೋಡಿ....ಆರ್ಭಟಿಸಿ, ಹಾರಾಡಿ.... ಝೇಂಕರಿಸಿ—ಗಲಾಟೆ ಆರಂಭಿಸುತ್ತಾಳೆ. ಆ ವೇಳೆಗೆ ಒಳಗಿನಿಂದ ಜೇಡ ಬಂದು ತನ್ನ ಮನೆಯ ಕಿಂಡಿಯಲ್ಲಿ ಇಣಿಕಿ ನೋಡಿ ಕಣಜವನ್ನು ದಿಟ್ಟಿಸು ತ್ತದೆ. ಕಣಜ ಹಿಮ್ಮೆಟ್ಟಿ ಹಾರಿ ಬಿಡುತ್ತದೆ. ಜೇಡನೂ ತನ್ನ ಗೂಡಿನ ಒಳಕ್ಕೆ ಸರಿಯುತ್ತದೆ. ಕಣಜ ಪುನಃ ಬರುತ್ತದೆ. ಜೇಡ ನಾನೇನು ಕಡಿಮೆಯೆಂದು ಗೂಡಿನ ಹೊರಗೇ ಬಂದು ಕಣಜದ ಮುಖವನ್ನು ದುರು ಗುಟ್ಟಿಕೊಂಡು ನೋಡುತ್ತದೆ. ಕಣಜ ಬೆದರಿ ಪುನಃ ಹಾರಿ ಬಿಡುತ್ತದೆ.

ಫೇಬರನಿಗೆ ಬಹಳ ಕುತೂಹಲ ಉಂಟಾಯಿತು. ಕೊನೆಗೇನಾಗು ತ್ತದೋ ನೋಡಬೇಕು ಎಂದುಕೊಂಡ. ಇಂಥ ದುಷ್ಟ ಜೇಡವನ್ನು ಆ ಕಣಜ ಹೇಗೆ ಸೋಲಿಸಿ ಎಳೆದೊಯ್ಯುತ್ತದೆ, ನೋಡಲೇ ಬೇಕು ಎಂದು ಕೊಂಡು ಆ ಹಳೆಯ ಮೋಟು ಗೋಡೆಯ ಹತ್ತಿರವೇ ವಾರಗಟ್ಟಲೆ ಕಾದು ಕುಳಿತ.

ಫೇಬರನ ಕಣ್ಣೆದುರಿಗೇ ಆ ಕಣಜ ಆಗಾಗ ಬಂದು ಜೇಡನ ಒಂದು ಕಾಲನ್ನು ಫಕ್ಕನೆ ಹಿಡಿದು ಅದನ್ನು ಕಿಂಡಿಯಿಂದೀಚೆಗೆಳೆಯಲು ಪ್ರಯತ್ನಿ ಸುತ್ತಿತ್ತು. ಆದರೆ ಜೇಡ ತನ್ನ ಹಿಂಗಾಲುಗಳಿಂದ ಗೋಡೆಯ ಅಂಚನ್ನು

ಭದ್ರವಾಗಿ ಹಿಡಿದುಕೊಂಡು ಒಳಗೇ ಉಳಿದುಕೊಳ್ಳುತ್ತಿತ್ತು. ಮತ್ತೆ ಮತ್ತೆ ಆ ಕಣಜ ಹಾರಾಡಿಕೊಂಡು ಬಂದು ಇದ್ದಕ್ಕಿದ್ದಂತೆ ಜೇಡನ ಮೇಲೆ ಧಾಳಿ ಮಾಡುತ್ತಿತ್ತು. ಎಳೆಯುತ್ತಿತ್ತು. ಜೇಡ ತಪ್ಪಿಸಿಕೊಂಡು ತನ್ನ ಕೋಟೆಯೊಳಗೆ ಸೇರಿಕೊಂಡುಬಿಡುತ್ತಿತ್ತು. ತಾಳಿದವನು ಬಾಳಿಯಾನು ಅಂತ ಕೊನೆಗೊಂದು ಸಲ ಜೇಡನನ್ನು ಕಣಜ ಹೊರಕ್ಕೆಳೆದೇ ಬಿಡುತ್ತದೆ. ಸ್ವಲ್ಪ ಎತ್ತರಕ್ಕೆ ಹಾರಿ ಅದನ್ನು ಕೆಳಕ್ಕೆ ಎತ್ತಿ ಹಾಕುತ್ತದೆ. ಜೇಡ ಅಂತಹ ದುಃಸ್ಥಿತಿಯಲ್ಲಿ ಗುಂಡಗೆ ಚೆಂಡಿನಂತೆ ಮುದುರಿಕೊಳ್ಳುತ್ತದೆ. ಅದರ ನರಗಳೆಲ್ಲ ಸೇರಿರುವ ಕೇಂದ್ರದಲ್ಲಿ ಮಾತ್ರ ಕಣಜ ಅದನ್ನು ಕಚ್ಚುವುದು. ಆಯಿತು, ಅಲ್ಲಿಗೆ ಜೇಡನಿಗೂ ಪಾರ್ಶ್ವವಾಯು ಬಂದು ಬಿಡುತ್ತದೆ. ಮನೆಯೊಳಗೆ ಎಷ್ಟೇ ಜಬರದಸ್ತು ಮಾಡಿದರೂ ಹೊರಗೆ ಬಂದಾಗ ಜೇಡ ಬರಿಯ ಹೇಡಿ ಎಂಬುದು ಕಣಜಕ್ಕೆ ಗೊತ್ತು. ಅದರಿಂದಲೇ ಕಣಜ ಜೇಡನನ್ನು ಹೊರಕ್ಕೆಳೆದು ಕಚ್ಚುವುದು."



ಹೆಜ್ಜೇಡವನ್ನು ಎಳೆಯುವ ಕಣಜ

"ಆಮೇಲೇನಾಗುತ್ತದೆ?" ಕೇಳಿದ ಸೀನು.

"ಆಮೇಲೇನಾಗುತ್ತದೆ ಗೊತ್ತೇನು? ಆ ಜೇಡವನ್ನು ಎಳೆದುಕೊಂಡು ಹೋಗಿ, ಅದರ ಗೂಡಿನಲ್ಲೇ ಇಟ್ಟು, ಅದರ ಮೈಮೇಲೆ ತನ್ನ ಮೊಟ್ಟೆಗಳನ್ನಿಡುತ್ತದೆ. ರೇಶಿಮೆ ಎಳೆಯ ಪರದೆಗಳಿಂದ ಸಿಂಗಾರವಾದ ಆ ಬೆಚ್ಚಗಿನ ಗೂಡಿನಲ್ಲಿ ಕಣಜದ ಮರಿ ಅದನ್ನು ತಿನ್ನುತ್ತದೆ. ನಿಮಗೆ ಗೊತ್ತಿರ ಬೇಕಲ್ಲ? ಆ ಜೇಡ ಸತ್ತಿಲ್ಲ. ಸುಮ್ಮನೆ ಅಲ್ಲಾಡದೆ ಬಿದ್ದಿದೆ ಅಷ್ಟೆ. ಬೆಚ್ಚಗೆ

ಸೊಗಸಾದ ಹೊಸ ಮಾಂಸ ; ಅದೂ ಮನೆಯ ಯಜಮಾನನದು. ಜೊತೆಗೆ ಅವನದೇ ಬೆಚ್ಚಗಿನ ಮನೆ ಕಣಜದ ಮರಿಯ ಈ ವೈಭೋಗಕ್ಕೇನು ಹೇಳುತ್ತೀರಿ ?

ಹೆಜ್ಜೇಡನಲ್ಲಿ ದೋಷಗಳೆಷ್ಟಾದರೂ ಇರಬಹುದು. ಆದರೆ ಮೆಚ್ಚಲೇ ಬೇಕಾದ ಒಂದು ಗುಣ ಎಂದರೆ ಅದರ ತಾಯ್ತನ. ಫೇಬರನಿಗೂ ಈ ಜೇಡಗಳಿಗೂ ಬಹಳ ಗೆಳೆತನ. ತನ್ನ ಓದುವ ಕೋಣೆಯಲ್ಲೂ ಇವಕ್ಕೆ ಸ್ಥಳ ಕೊಟ್ಟಿದ್ದ. ಆಗಾಗ್ಗೆ ಏನು ಮಾಡುತ್ತೀರಿ ? ಏನಡಿಗೆ ? ಏನು ವಿಶೇಷ ಎಂದು ಅವುಗಳನ್ನು ವಿಚಾರಿಸಿಕೊಳ್ಳುತ್ತಿದ್ದ."

"ಪಾಪ, ಪಾಪ! ಅವು ಬಹಳ ಮಾತಾಡಿ ಬಿಟ್ಟಿರಬೇಕು, ಅವನ ಹತ್ತಿರ...." ಎಂದು ಬಾಲು.

"ಮಾತಾಡಬೇಕೆ ? ಮಾಡಿ ತೋರಿಸುತ್ತಿದ್ದುವು. ಫೇಬರ್ ನೋಡಿ, ಪರೀಕ್ಷೆ ಮಾಡಿ, ಖಾತರಿ ಮಾಡಿಕೊಳ್ಳುತ್ತಿದ್ದ.

ಕಲ್ಲು ಮುಳ್ಳಿನ ಪ್ರದೇಶದಲ್ಲಿ ಹೆಜ್ಜೇಡನಿಗೆ ಬೇಕಾದಷ್ಟು ಮನೆಗಳಿವೆ. ಹೆಜ್ಜೇಡನಿಗೆ ಅಂತಹ ಸನ್ನಿವೇಶವೇ ಪ್ರಶಸ್ತ. ಹೆಜ್ಜೇಡನ ಮನೆ ಸಣ್ಣ



ಹೆಜ್ಜೇಡ

ಪುಟ್ಟದಲ್ಲ, ಬಲವಾದ ದುರ್ಗ. ಮೊದಲು ಅದೊಂದು ಆಳವಾದ, ಸ್ವಲ್ಪ ದೊಡ್ಡದಾದ ಕಿಂಡಿಯಂತೆ ಆರಂಭವಾಗುತ್ತದೆ. ಅಲ್ಲಿಂದ ನೆಲಮಾಳಿಗೆಯ ಕಡೆಗೆ ದಾರಿ. ಅಲ್ಲಿಂದ ಎಡ ಬಲಗಳಿಗೆ ಸುತ್ತು ಬಳಸಿನ ಮಾರ್ಗ. ಮನೆಯ ತುದಿಗೆ ಒಂದು ಕೋಣೆ. ಅದೇ ಹೆಜ್ಜೇಡನ ವಿಶ್ರಾಂತಿ ಸ್ಥಾನ. ಗೋಡೆಗಳಿಗೆಲ್ಲ ತಾನೇ ಸ್ವತಃ ತಯಾರಿಸಿದ ರೇಷ್ಮೆದಾರದ ಪರದೆಗಳನ್ನು ಕಟ್ಟಿರುತ್ತದೆ. ಧೂಳು ಬರದಿರುವುದಕ್ಕೂ ಆಯಿತು, ನೆಲಮಾಳಿಗೆಯಿಂದ ಮನೆಯ ಮೇಲ್ಭಾಗಕ್ಕೆ ಬರಲು ನೂಲೇಣಿಯೂ ಆಯಿತು. ಹೆಜ್ಜೇಡ ತನ್ನ ಮನೆಯ ಎತ್ತರವಾದ ಗೋಪುರದಲ್ಲಿ ಕುಳಿತು ಸುತ್ತಣ ಪ್ರಪಂಚ ವನ್ನು ಪರಿಶೀಲಿಸುತ್ತದೆ. ಜೇಡ ಮನೆಯ ಬಾಗಿಲ ಸುತ್ತ ಒಂದು ಕೈಪಿಡಿ ಗೋಡೆ ಕಟ್ಟಿಕೊಂಡಿರುತ್ತದೆ. ಸಾಲಾಗಿ ಜೋಡಿಸಿದ ಎಲೆಗಳು, ದುಂಡು ಕಲ್ಲುಗಳು, ಮರದ ಚೂರುಗಳು ಎಲ್ಲವನ್ನೂ ಸೇರಿಸಿ ತನ್ನ ರೇಷ್ಮೆಯಿಂದ ನೇಯ್ದು ಕೈಪಿಡಿ ಗೋಡೆಯನ್ನು ತಯಾರು ಮಾಡುತ್ತದೆ.

ಫೇಬರ್ ಕಿಟಕಿಯ ಮೂಲಕ ಅವಳ ದೊಡ್ಡ ಮನೆಯನ್ನು ನೋಡು ತ್ತಿರುತ್ತಿದ್ದ. ಹಾಗೆಯೇ ಮೂರು ವರ್ಷಗಳ ಕಾಲ ಅವಳನ್ನು ಗಮನಿಸಿ ಪರೀಕ್ಷಿಸಿದ. ನಿಜ ಹೇಳುವುದಾದರೆ ಜೇಡನಂಥ ಮನೆಮೂಳ ಇನ್ನೊಂದಿಲ್ಲ. ಕೈಗೆ ಸಿಕ್ಕಿದ ಸಾಮಾನುಗಳಿಂದ ಜಗಲಿಗಳನ್ನು ನಿರ್ಮಿಸಿಕೊಳ್ಳುತ್ತಾ ಕಾಲ ಕಳೆಯುತ್ತದೆ. "ನೀನು ಶ್ರೀಮಂತಳಾಗಿದ್ದರೆ ಎಂಥ ಜಗಲಿ ಕಟ್ಟಿ ಕೊಳ್ಳುತ್ತಿದ್ದೆ ?" ಎಂದು ಫೇಬರ್ ಅವಳನ್ನು ಕೇಳಿದ. ಬಣ್ಣ ಬಣ್ಣದ ಉಲ್ಲನಿನ ದಾರಗಳನ್ನೂ, ದುಂಡಗಿನ ಕಲ್ಲುಗಳನ್ನೂ, ತಾಳೆಯ ನಾರುಗಳನ್ನು ಕೊಟ್ಟು ಅವಳನ್ನು ಶ್ರೀಮಂತಳನ್ನಾಗಿ ಮಾಡಿದ. ಅದು ಸ್ವಲ್ಪವೂ ಹಿಂದು ಮುಂದು ನೋಡದೆ ಆ ಸಾಮಾನುಗಳನ್ನೆಲ್ಲ ಉಪಯೋಗಿಸಿಕೊಂಡು ಜೇಡಗಳೇ ಕಂಡು ಅರಿಯದಂತಹ ದುರ್ಗಮವಾದ ಕೋಟೆಯನ್ನು ನಿರ್ಮಿಸಿ ಕೊಂಡಿತು. ಫೇಬರನ ಮನೆಯನ್ನು ನೋಡಲು ಬಂದವರೆಷ್ಟೋ ಜನ ಅದನ್ನ ಫೇಬರನೇ ಮಾಡಿದ ಯಾವುದೋ ವಿಲಕ್ಷಣ ಕೆಲಸ ಎಂದು ಕೊಂಡರು.

ಹೆಜ್ಜೇಡ ತನ್ನ ಮನೆಯ ಬಾಗಿಲನ್ನು ಅಲ್ಲೇ ಬಿದ್ದಿದ್ದ ಕಚಡಾ ಸಾಮಾನಿಂದ ತಯಾರಿಸಿದ ಪರದೆಯಿಂದ ಮುಚ್ಚಿಕೊಳ್ಳುತ್ತಿತ್ತು. ಎಷ್ಟೋ

ಬಾರಿ ಅಂತಹ ಪರದೆಗಳು ಜೇಡ ತಿಂದ ಕ್ರಿಮಿಗಳ ತಲೆಗಳನ್ನು ಸೇರಿಸಿ ನೇಯ್ದುವಾಗಿರುತ್ತಿದ್ದುವು."

"ಓ.... ನಮ್ಮೂರಿನಲ್ಲಿ ತಾವು ಕೊಂದ ಹುಲಿ ಚಿರತೆಗಳ ಚರ್ಮಗಳನ್ನು ಮನೆಯ ಗೋಡೆಗೆ ನೇತು ಹಾಕಿಕೊಳ್ಳುತ್ತಾರಲ್ಲ ಹಾಗೆ!" ಎಂದು ಹೇಳಿದ ಬಾಲು.

"ಹೌದು, ಒಮ್ಮೊಮ್ಮೆ ಅವಳ ಮನೆಯ ಬಾಗಿಲು ತೆರೆದಿರುತ್ತದೆ. ಹಾಗೆ ತೆಗೆದಾಗಲೆಲ್ಲ ಅದು ತಲೆಯನ್ನು ಹೊರಗಿಟ್ಟುಕೊಂಡು ತನ್ನೆದುರಿಗಿನ ಸ್ಥಳವನ್ನೇ ದುರುಗುಟ್ಟಿಕೊಂಡು ನೋಡುತ್ತಿರುತ್ತದೆ. ಅದರ ಕೈಗಳು ಸಿಕ್ಕಿದುದನ್ನು ಬಾಚಿಕೊಳ್ಳಲು ಸಿದ್ಧವಾಗಿರುತ್ತವೆ. ಆ ದಾರಿಯಲ್ಲಿ ಕಾಲಿಟ್ಟ ಕ್ರಿಮಿಗಳ ಗತಿ ಮುಗಿದ ಹಾಗೆಯೇ. ಹೆಜ್ಜೇಡ ಎಳೆಯ ವಯಸ್ಸಿನಲ್ಲಿ ಮನೆಮಠವಿಲ್ಲದೆ, ಆಹಾರ ಹುಡುಕುತ್ತಾ ತಿರುಗುತ್ತಿರುತ್ತದೆ. ಕಣ್ಣಿಗೆ ಬಿದ್ದ ಆಹಾರಕ್ಕಾಗಿ ಎಗರಿ ಅದನ್ನು ಹಿಡಿಯುತ್ತದೆ. ಬೆಳೆದು ದೊಡ್ಡದಾದ ಮೇಲೆ ತನ್ನ ಅರಮನೆಯ ನಿರ್ಮಾಣಕ್ಕೆ ತೊಡಗುತ್ತದೆ. ಅದರ ಆಯುಧ ಯಾವುದಿರಬಹುದು? ಊಹಿಸುತ್ತೀರಾ.... ಹಲ್ಲು. ಫೇಬರ್ ಕಣ್ಣಾರೆ ಕಂಡ ಮೇಲೆ ನಂಬಲೇ ಬೇಕಾದ ವಿಷಯ!

ಬರಿಯ ಜೇಡ ಒಂದೇ ಅಲ್ಲ, ಎಲ್ಲಾ ಕ್ರಿಮಿಗಳ ವಿಷಯದಲ್ಲೂ ಒಂದು ವಿಲಕ್ಷಣ ಸಂಗತಿಯುಂಟು. ತಮ್ಮ ಜೀವಮಾನದಲ್ಲಿ, ಯಾವುದೋ ನಿರ್ದಿಷ್ಟ ಸಮಯಗಳಲ್ಲಿ ಮಾತ್ರ ಅವು ಅಗೆಯುವುದನ್ನೋ ಕಟ್ಟುವುದನ್ನೋ ಅಥವಾ ಅಂತಹ ಇನ್ನ್ಯಾವುದೋ ಕೆಲಸವನ್ನೋ ಕೈಗೊಳ್ಳುತ್ತವೆ. ಬೇರೆ ಸಮಯದಲ್ಲಿ ಅವು ಅಂತಹ ಕೆಲಸಗಳನ್ನು ಮಾಡಲಾರವು. ಅಗೆಯಲು ಪ್ರಾರಂಭಿಸಿ ಈಗಾಗಲೇ ಕಾಲು ಅಂಗುಲದಷ್ಟು ಅಗೆದಿರುವ ಜೇಡನನ್ನು ಫೇಬರ್ ಬೇರೆಯ ಕಡೆ ತಾನು ಕಾಲು ಅಂಗುಲ ತೋಡಿರುವ ಜಾಗದಲ್ಲಿ ಬಿಟ್ಟಾಗ ಜೇಡ ಅದನ್ನು ಮುಂದಕ್ಕೆ ಅಗೆಯಲು ಪ್ರಾರಂಭಿಸಿತು. ಅಲ್ಲಿಂದ ತೆಗೆದು ಕೊಂಡು ಹೋಗಿ ಅದನ್ನು ಸ್ವಲ್ಪವೂ ಅಗೆಯದ ಜಾಗದಲ್ಲಿ ಬಿಟ್ಟಾಗ ಅದು ಏನು ಮಾಡಲೂ ತೋರದೆ ಸುಮ್ಮನೆ ಸತ್ತೇ ಹೋಯಿತು. ಆಗಲೇ ಆರಂಭಿಸಿದ ಕೆಲಸವನ್ನು ಪುನಃ ಆರಂಭಿಸಲಾರದೆ ಅದು ಎದೆಯೊಡೆದುಕೊಂಡಿತು. ಯಾವ ಕ್ರಿಮಿಗೇ ಆಗಲಿ ತಾವು ಮಾಡಬೇಕಾದುದೇನು ಎಂಬುದು ತಿಳಿಯುವುದಿಲ್ಲ. ಫೇಬರ್

ಎಷ್ಟೋ ಪ್ರಯೋಗಗಳನ್ನು ಮಾಡಿ ನೋಡಿದ. ಒಂದು ಜೇನು ನೊಣ ತನ್ನ ಗೂಡನ್ನು ಮುಕ್ಕಾಲು ತುಂಬಿಸಿತ್ತು. ಅದನ್ನು ಪೂರ್ತಿ ತುಂಬಿಸಿ ಮುಚ್ಚಿದ ಗೂಡಿನ ಹತ್ತಿರ ಬಿಟ್ಟಾಗ ಅದು ಅದರ ಅಂಚಿನ ಮೇಲೆ ತಂದಿದ್ದ ಜೇನನ್ನು ಸುರಿದು ಗೂಡನ್ನು ಮುಚ್ಚಲು ಪ್ರಯತ್ನ ಪಡುತ್ತಿತ್ತು.

ತಾಯಿ ಜೇಡ ಸೊಗಸಾದ ರೇಷ್ಮೆಯ ರತ್ನಗಂಬಳಿಯನ್ನು ನೇಯ್ದು ಅದರ ಮೇಲೆ ತನ್ನ ಮೊಟ್ಟೆಗಳನ್ನಿಡುತ್ತದೆ. ಆಮೇಲೆ ಆ ಕಂಬಳಿಯನ್ನು ಸುತ್ತಿ ಸುತ್ತಿ ಉಂಡೆ ಮಾಡುತ್ತದೆ. ಆಗ ಅದು ಒಳಗೆಲ್ಲ ಮೊಟ್ಟೆಗಳಿಂದ ತುಂಬಿದ ರೇಶಿಮೆಯ ಚೆಂಡಾಗುತ್ತದೆ.

ಆ ಚೀಲವನ್ನು ಕಂಡರೆ ಅದಕ್ಕೆಷ್ಟು ಮೋಹ! ಎಲ್ಲಿ ಹೋದರೂ ಅದನ್ನು ಜೊತೆಗೇ ತೆಗೆದುಕೊಂಡು ಹೋಗುತ್ತದೆ. ವಿಶ್ರಾಂತಿ ತೆಗೆದು ಕೊಳ್ಳುವಾಗ, ಬೇಟೆಯಾಡುವಾಗ, ಕ್ರಿಮಿ ಕೀಟಗಳ ಮೈಮೇಲೆ ಹಾರು ವಾಗ ಕೂಡ ಅದನ್ನು ಬಿಟ್ಟಿರುವುದಿಲ್ಲ. ಯಾವುದಾದರೂ ಆಕಸ್ಮಿಕದಿಂದ ಅದರ ಎಳೆಗಳು ಸ್ವಲ್ಪ ಕಿತ್ತುಹೋದರೆ, ಹುಚ್ಚು ಹಿಡಿದಂತೆ ಅದನ್ನು ಅಲ್ಲೇ ರಿಪೇರಿ ಮಾಡಲು ತೊಡಗುತ್ತದೆ. ತನ್ನ ಆ ನಿಧಿಯನ್ನು ಭಕ್ತಿಯಿಂದ ತಬ್ಬಿ ಕೊಂಡು, ಅದನ್ನು ಕಿತ್ತುಕೊಳ್ಳಲು ಬಂದವರು ಯಾರೇ ಇರಲಿ ಅವರನ್ನು ಕಚ್ಚಲು ಭಯಂಕರವಾಗಿ ಮೇಲೆ ಬೀಳುತ್ತದೆ. ಮೂರು ವಾರಗಳ ಕಾಲ ಗಂಟೆ ಗಟ್ಟಲೆ ಅದನ್ನು ತನ್ನ ಹಿಂಗಾಲುಗಳಲ್ಲಿ ಹಿಡಿದು ಸೂರ್ಯನ ಶಾಖ ಕೊಡುತ್ತದೆ. ಆ ಚೆಂಡನ್ನು ತಿರುಗಿಸಿ, ತಿರುಗಿಸಿ ಸೂರ್ಯನ ಶಾಖ ಅದರ ಎಲ್ಲಾ ಭಾಗದ ಮೇಲೂ ಬೀಳುವಂತೆ ಮಾಡುತ್ತದೆ. ಫೇಬರ್ ಅದನ್ನೇ ನಾದರೂ ಇಕ್ಕಳದಿಂದ ಕಿತ್ತುಕೊಳ್ಳಲು ನೋಡಿದರೆ ರೋಷದಿಂದ ಅವನ ಮೇಲೇ ಬೀಳಲು ಹೋಗುತ್ತಿತ್ತು. ಅದನ್ನು ಕಿತ್ತುಕೊಂಡು ಬೇರೆ ಯಾವು ದಾದರೂ ಜೇಡದ ಮೊಟ್ಟೆಗಳ ಚೀಲವನ್ನು ಕೊಟ್ಟಾಗ, ತನ್ನ ಚೀಲ ಸಿಕ್ಕಿ ದ್ದರೆ ಹೇಗೋ ಹಾಗೆ ತೃಪ್ತಿಯಿಂದ ಇದ್ದು ಬಿಡುತ್ತಿತ್ತು. ಒಂದೊಂದು ವೇಳೆ ಬರಿಯ ಉಲ್ಲನಿನ ಚೆಂಡು ಕೊಟ್ಟರೂ ಆ ಬೆಪ್ಪು ಅದನ್ನೇ ಸೂರ್ಯ ನಿಗೆ ಹಿಡಿದು ಶಾಖ ಕೊಟ್ಟು ಉಪಚರಿಸುತ್ತಿತ್ತು.

ಚೆಂಡಿನಲ್ಲಿರುವ ಮೊಟ್ಟೆಗಳೆಲ್ಲ ಒಡೆದು ಮರಿ ಹೊರಬರುವ ಕಾಲದಲ್ಲಿ ನೋಡಬೇಕು. ಅವೆಲ್ಲ ತಕ್ಷಣವೇ ತಾಯಿಯ ಬೆನ್ನ ಮೇಲೇರಿ ಕುಳಿತು

ಬಿಡುತ್ತವೆ. ಮೂರು ನಾಲ್ಕು ಪದರಗಳಷ್ಟು ಮರಿಗಳನ್ನು ಹೆಜ್ಜೇಡ ಏಳು ತಿಂಗಳ ಕಾಲ ಹೊತ್ತುಕೊಂಡು ತಿರುಗುತ್ತದೆ. ಆ ಮರಿಗಳಂತೂ ಬಹಳ ಜಾಣರು. ಯಾರೊಬ್ಬರೂ ತಂಟೆ ಮಾಡುವುದಿಲ್ಲ. ಅಕ್ಕ ಪಕ್ಕದವರನ್ನು ಕೀಟಲೆ ಮಾಡುವುದೂ ಇಲ್ಲ. ಎಲ್ಲರೂ ಜೋಪಾನವಾಗಿ ಸಾಲುಸಾಲಾಗಿ ಕುಳಿತಿರುತ್ತಾರೆ. ಅವರಮ್ಮನ ಪಾಲಿಗೆ ಅವರೇ ಪ್ರಾಕು. ಒಮ್ಮೊಮ್ಮೆ ಅವರಲ್ಲಿ ಒಬ್ಬಿಬ್ಬರು ನೆಲದ ಮೇಲಕ್ಕೆ ಪಲ್ಟಿ ಹೊಡೆಯುವುದುಂಟು. ಅವರಮ್ಮನಿಗೇನಂತೆ? ಅವಳು ತಿರುಗಿ ಕೂಡ ನೋಡುವುದಿಲ್ಲ. ಅವೇ ಓಡಿ ಬಂದು ಪುನಃ ಬೆನ್ನಿನ ಮೇಲೆ ಕುಳಿತರೆ ಸರಿ. ಹತ್ತಿದರೂ ಬಿಟ್ಟರೂ ಅವರಮ್ಮನಿಗೆ ಚಿಂತೆಯಿಲ್ಲ. ಫೇಬರ್, ಅವಳ ಮರಿಗಳನ್ನೆಲ್ಲಾ ತೆಗೆದು ಕೊಂಡು ಬೇರೆಯ ಮರಿಗಳನ್ನು ಕೊಟ್ಟರೂ ತಾಯಿಜೇಡ ಒಂದೇ ವಿಧ ವಾದ ತೃಪ್ತಿಯಿಂದ ಇರುತ್ತದೆ. ಅವಳಿಗೆ ತನ್ನ ಮಕ್ಕಳ ಮೇಲೆ ಮೋಹ ಇದ್ದ ಹಾಗೆ ಕಾಣೆ. ಒಂದು ದಿನ ಫೇಬರ್ ನೋಡುತ್ತಿದ್ದಾಗ ಇಬ್ಬರು ತಾಯಂದಿರಲ್ಲಿ ಪರಸ್ಪರ ಜಗಳವಾಗಿ ಒಬ್ಬ ತಾಯಿ ಇನ್ನೊಂದನ್ನು ತಿಂದೇ ಬಿಟ್ಟಳು. ಆ ಮೇಲೆ ಆ ತಾಯಿ ಸತ್ತ ತಬ್ಬಲಿಗಳನ್ನು ತಾನೇ ದತ್ತು ತೆಗೆದುಕೊಂಡು ಬಿಟ್ಟಳು. ಅಲ್ಲಿಂದ ಮುಂದಕ್ಕೆ ಅಂತಹ ದುಃಸ್ಥಿತಿಯಲ್ಲಿ ಕೂಡಿದ ಎರಡು ಸಂಸಾರಗಳೂ ಒಂದೇ ಸಂಸಾರವಾಗಿ ಪರಿಣಮಿಸಿದವು."

"ಅಷ್ಟೆಲ್ಲಾ ಮರಿಗಳಿಗೆ ಊಟ ಹಾಕುವುದು ಹೇಗಪ್ಪಾ ಮಾರಾಯ!" ತಲೆಯ ಮೇಲೆ ಕೈಯನ್ನೇ ಇಟ್ಟುಕೊಂಡಳು ವಸಂತಿ.

"ಅವು ಬರಿಯ ಸೂರ್ಯನ ಶಾಖದಿಂದಲೇ ಬದುಕುತ್ತವೆ. ದೊಡ್ಡದಾಗಿ ಬೆಳೆಯುವವರೆಗೂ ಅವು ಏನೂ ತಿನ್ನುವುದೇ ಇಲ್ಲ. ಬೆಳೆದ ಮೇಲೆ ಸ್ವಂತವಾಗಿ ಬೇಟೆಯಾಡಿ ಜೀವಿಸುತ್ತವೆ."

# ಸಂಗೀತಗಾರರು

" ಏನು ವಿಚಿತ್ರ ಕಥೆಗಳಪ್ಪ ! ಈಗ ಮರಗಳ ಮೇಲೆ ಕೆಲವು ಕೀಟ ಗಳು ಟ್ರೀ....ಅಂತ ಅರಚುತ್ತವಲ್ಲ ಅವುಗಳ ಕಥೆ ಹೇಳು "ಎಂದಳು ವಸಂತಿ.

" ಅವು ಹಾಗೆ ಸಂಗೀತ ಹಾಡುವುದಕ್ಕೆ ಎಷ್ಟೋ ಕಾರಣಗಳಿವೆ. ಹೇಳಿದರೆ ಅದೇ ಒಂದು ಕಥೆಯಾಗುತ್ತದೆ."



ಪೈನ್ ಕಾಕ್ ಚೇಪರ್

" ಯಾಕೆ ಹಾಡುತ್ತವೆ ಅವು ?" ಕೇಳಿದ ಬಾಲು.

" ಒಂದೊಂದಕ್ಕೆ ಒಂದೊಂದು ಕಾರಣ. 'ಪೈನ್‌ಕಾಕ್ ಚೇಫರ್' ಅಂತ ಒಂದು ಮುದ್ದಾದ ಜೀರುಂಡೆ ಇದೆ. ಅದು ಯಾವಾಗಲೂ ಪೈನ್ ಮರಗಳಲ್ಲೇ ವಾಸ ಮಾಡುವುದರಿಂದ ಅದಕ್ಕೆ ಆ ಹೆಸರು. ಅದರ ಬೆನ್ನಿಗೆ ಮಕಮಲ್ಲಿನ ಕೋಟು ಹಾಕಿದಂತಿರುತ್ತದೆ. ಮೇಲೆ ಬಿಳಿಯ ಹೂವಿನ ಚಿತ್ತಾರ. ತಲೆಯ ಮೇಲೆ ಭರ್ಜರಿಯಾದ ಏಳು ಪದರದ ಗರಿ. ಇಷ್ಟೆಲ್ಲಾ

ಸಿಂಗಾರ ಅದಕ್ಕೆ. ಇದೆಲ್ಲ ಅಲಂಕಾರವೂ ಅದಕ್ಕೆ ಹೆಂಡತಿಯ ಮುಂದೆ ಮೆರೆಯುವುದಕ್ಕೆ ಬಿಟ್ಟು ಇನ್ಯಾವ ರೀತಿಯ ಉಪಯೋಗವೋ ನಾನು ಬೇರೆ ಕಾಣೆ ಎನ್ನುತ್ತಾನೆ ಫೇಬರ್.

ಈ ಜೀರುಂಡೆ ಸಾಮಾನ್ಯವಾಗಿ ಸದ್ದು ಮಾಡುವುದಿಲ್ಲ. ಆದರೆ ಏನಾದರೂ ಕಷ್ಟಬಂದರೆ ಆಗ ರಾಗರಾಗವಾಗಿ ಗೋಳಾಡುವುದಕ್ಕೆ ಆರಂಭಿಸಿಬಿಡುತ್ತದೆ. ನೀವು ಒದ್ದೆ ಬೆರಳಿನಿಂದ ಗಾಜಿನ ಮೇಲೆ ಉಜ್ಜಿ ಸದ್ದುಮಾಡ್ತೀರಲ್ಲ, ಸ್ವಲ್ಪ ಅಂಥದೇ ರೀತಿಯಲ್ಲಿ ಅದರ ಆಲಾಪನೆ. ತನ್ನ ಮೃದುವಾದ ಮೈಯನ್ನು ರೆಕ್ಕೆಯ ಅಂಚಿಗೆ ಉಜ್ಜಿ ಲಯಬದ್ಧವಾದ ಶೋಕಗೀತೆಯನ್ನು ಹೊರಡಿಸುತ್ತದೆ.

ಆಮೇಲೆ ಇನ್ನೊಂದು ರೀತಿಯ ದುಂಬಿಗಳಿವೆ. ಅವಕ್ಕೆ ಬಹಳ ಪ್ರಿಯವಾದ ಆಹಾರ ಅಂದರೆ ನೆಲದೊಳಗೆ ಬೆಳೆಯುವ ಒಂದು ತರದ ನಾಯಿ ಕೊಡೆಗಳು. ಫೇಬರ್ ಅವುಗಳನ್ನು ಪರೀಕ್ಷೆ ಮಾಡುವುದಕ್ಕೆ ಅಂತಹೆ ಅಣಬೆಗಳನ್ನು ನೆಲದೊಳಗೆ ಹೂತಿಟ್ಟು ಚೆನ್ನಾಗಿ ಮಣ್ಣು ಮುಚ್ಚಿ ಗಟ್ಟಿಸಿ ಗುರುತಿಗೆ ಒಂದೊಂದು ಹುಲ್ಲೆಸಳನ್ನು ಇಟ್ಟು ಆಮೇಲೆ ಆ ದುಂಬಿಗಳನ್ನು ಬಿಟ್ಟಾಗ ಅವು ಸ್ವಲ್ಪವೂ ತಡವರಿಸದೆ ನೇರವಾಗಿ ಆ ನಾಯಿಕೊಡೆಗಳಿದ್ದ ಸ್ಥಳದಲ್ಲೇ ಕೊರೆದು ತಮ್ಮ ಆಹಾರವನ್ನು ಕಂಡವು. ಆ ನಾಯಿಕೊಡೆಗಳಿಗೆ ವಾಸನೆಯೂ ಇದ್ದಂತೆ ಕಾಣಲಿಲ್ಲ. ಆ ದುಂಬಿಗಳು ಕೂಡ ತಾವು ಕ್ಷೋಭೆಗೊಂಡಾಗ ರಾಗ ತೆಗೆದುಬಿಡುತ್ತವೆ.

ಇನ್ನು ಕೆಲವು ತಮ್ಮ ಒಂಟಿ ಜೀವನಕ್ಕೆ ಬೇಸತ್ತು ಅದರಲ್ಲೇ ಸ್ವಲ್ಪ ಸ್ವಾರಸ್ಯವುಂಟುಮಾಡಿಕೊಳ್ಳಲು ಹಾಡುತ್ತವೆ. ಕೆಲವು ತಮ್ಮ ಜೊತೆಯ ಜೀವಿಯನ್ನು ಆಕರ್ಷಿಸಲು, ಕರೆಯಲು ಹಾಡುತ್ತವೆ. ಇನ್ನು ಕೆಲವಕ್ಕಂತೂ ತಾವು ಬದುಕಿದ್ದೇವಲ್ಲ ಎಂಬುದೇ ಆನಂದ. ಕೇಳುವವರ ಕಿವಿ ಚಿಟ್ಟಾದರೂ ಸರಿ ಹಾಡಿಯೇ ಹಾಡುತ್ತವೆ. ಅವುಗಳಲ್ಲಿ ಒಂದರ ಹೆಸರು ತಿತ್ತಿರಿ."

"ತಿತ್ತಿರಿ?"

"ಹೌದು ತಿತ್ತಿರಿ. ಎಂಥ ಮುದ್ದಿನ ಪ್ರಾಣಿ ಅದು ಎಂದರೆ, ಬೇಸಗೆಯ ಕಾಲದಲ್ಲಿ ಕೆರೆಕುಂಟೆಗಳೆಲ್ಲ ಒಣಗಿ ಕೀಟಗಳೆಲ್ಲ ಬಾಯಾರಿಕೆಯಿಂದ ಕಣ್ಣು ಬಾಯಿ ಬಿಡುತ್ತಿರುವಾಗ ಆ ತಿತ್ತಿರಿ ಮರದ ಎಳೆಯ ಕೊಂಬೆಗಳಲ್ಲಿ

ಕುಳಿತು ಅದರ ಕಾಂಡದಲ್ಲಿ ಸಣ್ಣ ತೂತು ಕೊರೆಯುತ್ತದೆ. ಅದರಿಂದ ಜಿನುಗುವ ಸಸ್ಯರಸವನ್ನು ಕುಡಿಯಲಾರಂಭಿಸುತ್ತದೆ. ಸುಮ್ಮನೆ ಕುಡಿ



ತಿತ್ತಿರಿ

ಯುತ್ತದೆಯೇ ? ಜೊತೆಗೆ ಹಾಡೂ ಹೇಳುತ್ತದೆ. ಆದರೆ ಬಾಯಲ್ಲಿ ಹಾಡುವುದಿಲ್ಲ, ಬಾಲದಿಂದ ಹಾಡುತ್ತದೆ. ತನ್ನ ಅಂಗಗಳನ್ನು ಒಂದಕ್ಕೊಂದು ಉಜ್ಜಿ ಸಂಗೀತ ಏರ್ಪಡಿಸುತ್ತದೆ. ಇಂತಹ ಸಸ್ಯರಸದ ಚಿಲುಮೆಯ ಪತ್ತೆ ಸಿಕ್ಕಿದ ತಕ್ಷಣವೇ ಇರುವೆಗಳೂ, ಗೊದ್ದಗಳೂ, ದುಂಬಿಗಳೂ, ಕಣಜಗಳೂ, ಜೀರುಂಡೆಗಳೂ ಎಲ್ಲ ಸಾಲುಸಾಲಾಗಿ ಬಂದುಬಿಡುತ್ತವೆ. ಎಲ್ಲವೂ ಸೇರಿ ಆ ಚಿಲುಮೆಯ ಯಜಮಾನನನ್ನೇ ಓಡಿಸಲು ಪ್ರಯತ್ನಪಡುತ್ತವೆ. ಇರುವೆಗಳಂತೂ ಅದರ ಕಾಲು ಸಂದಿಯಲ್ಲಿ ನುಸುಳಿ, ಕಾಲುಗಳನ್ನು ಕಚ್ಚಿ, ರೆಕ್ಕೆ ಹಿಡಿದೆಳೆಯುತ್ತವೆ. ಕಚಕುಳಿ ಇಡುತ್ತವೆ. ಕೊನೆಗೆ ಅದರ ರಸ ಹೀರುವ ನಳಿಕೆಯನ್ನೇ ಎಳೆಯಲಾರಂಭಿಸುತ್ತವೆ. ಈ ಕ್ಷುದ್ರ ಜೀವಿಗಳ

ಕಾಟವನ್ನು ತಡೆಯಲಾರದೆ ಆ ತಿತ್ತಿರಿ ಹಾರಿ ಮತ್ತೊಂದು ಸಸ್ಯದ ಮೇಲೆ ಕುಳಿತು ಹೊಸ ಚಿಲುಮೆ ತಯಾರಿಸುತ್ತದೆ. ಮತ್ತೆ ಅದೇ ಕಥೆ.

ತಿತ್ತಿರಿ ಬದುಕಿರುವುದು ಐದೇ ವಾರಗಳು. ಅಷ್ಟು ದಿನಗಳು ಅದಕ್ಕೆ ಮೊಟ್ಟೆ ಇಟ್ಟು, ರಸಕುಡಿದು, ಹಾಡುವುದಕ್ಕೆ ಸಾಲದೇ ಸಾಲದು. ಆದರೆ ಆ ಮೊಟ್ಟೆಯಲ್ಲಿನ ಜೀವಿ ತಿತ್ತಿರಿಯಾಗಿ ಬೆಳೆಯುವುದಕ್ಕೆ, ನೆಲದೊಳಗೆ ನಾಲ್ಕು ವರ್ಷಗಳನ್ನು ಕಳೆಯಬೇಕು. ಐದು ವಾರಗಳು ಸೂರ್ಯನ ಹೊಂಬೆಳಕಿನಲ್ಲಿ ಬದುಕುವುದಕ್ಕೆ ನಾಲ್ಕು ವರ್ಷಗಳ ಕತ್ತಲೆಯ ವಾಸ. ಬೆಳಕಿಗೆ ಬಂದೆವಲ್ಲ ಎಂಬ ಸಂತೋಷಕ್ಕೆ ಅವು ಇತರರು ಕಿವುಡಾಗುವವರೆಗೂ ಹಾಡುವುದರಲ್ಲಿ ಆಶ್ಚರ್ಯವೇನೂ ಇಲ್ಲ ಎನ್ನುತ್ತಾನೆ ಫೇಬರ್."

"ಹುಂ ಆಮೇಲೆ ತಿತ್ತಿರಿ ಕಷ್ಟ ಬಂದಾಗ ಏನು ಮಾಡುತ್ತೆ?" ಕೇಳಿದ ಸೀನು.

"ಆರ್ತನಾದ ಮಾಡುತ್ತೆ. ಆದರೆ ಚಿಮ್ಮಂಡೆ ಮತ್ತು ಹುಲ್ಲು ಮಿಡಿತೆ ಎರಡೂ ಕಷ್ಟ ಬಂದಾಗ ಸ್ವಲ್ಪವೂ ಮಿಸುಕೋದಿಲ್ಲ.

ಆದರೆ ಎಲ್ಲಕ್ಕಿಂತ ವಿಚಿತ್ರಸಂಗತಿ ಎಂದರೆ ನಮ್ಮ ಸಂಗೀತವನ್ನು ಈ ಸಂಗೀತಗಾರರು ಕಿವಿಗೇ ಹಾಕಿಕೊಳ್ಳುವುದಿಲ್ಲ. ನೀವು ಎಂಥೆಂಥಾ ಗೀತೆಗಳನ್ನೂ ನುಡಿಸಿದರೂ ಅವು ತಮ್ಮ ಪಾಡಿಗಿರುತ್ತವೆ. ಫೇಬರ್ ರಾಗ ಮಾಲಿಕೆಯನ್ನು ತೆಗೆದುಕೊಂಡು ಯಾವ ಯಾವ ಹಾಡು ನುಡಿಸಿದರೂ, ಎಂಥಹ ಕೀರಲುಧ್ವನಿಯಲ್ಲಿ ಕೂಗಿದರೂ ಅವು ಜಪ್ಪಯ್ಯ ಅನ್ನಲಿಲ್ಲ. ಸುತ್ತೆಲ್ಲ ನಿಶ್ಯಬ್ದವಾಗಿದ್ದಾಗ ಹೇಗಿರುತ್ತಿದ್ದುವೋ ಆಗಲೂ ಅಷ್ಟೇ ನಿಶ್ಚಿಂತೆಯಿಂದ ಇದ್ದುವಂತೆ."

"ಅವಕ್ಕೆಲ್ಲೋ ಕಿವುಡಿರಬೇಕು" ಎಂದ ಸೀನು.

"ಅದು ಹೇಗಾಗುತ್ತೆ. ಒಂದನ್ನೊಂದು ಹಾಡಿ ಆಕರ್ಷಿಸುವಾಗ, ಕೇಳಿಸುವುದಕ್ಕೆ ಕಿವಿ ಇರಲೇ ಬೇಕು" ಎಂದು ವಾದ ಹೂಡಿದ ಬಾಲು.

"ಹೌದು. ಆದರೆ ಅವುಗಳ ಕಿವಿ ಬೇರೆ ರೀತಿಯದಿರಬೇಕು, ಅಷ್ಟೆ."

# ಫೇಬರನ ಕಥೆ

" ಇವತ್ತು ಎಂತಹ ಕಥೆ ಬೇಕು ನಿಮಗೆ? "

" ಇದನ್ನೆಲ್ಲ ಕಂಡುಹಿಡಿದನಲ್ಲಾ, ಆ ಫೇಬರ್, ಅವನ ವಿಷಯ ಹೇಳು. ಅವನು ಯಾರು? ಎಂಥವನು? " ವಸಂತಿ ಕೇಳಿದಳು.

" ಹೌದು. ಅದು ಎಲ್ಲಕ್ಕಿಂತ ಸೊಗಸಾದ ಕಥೆ....ಅವನೊಬ್ಬ ಬಹಳ ಸಾಮಾನ್ಯನಾದ ಹಳ್ಳಿಯ ಪುಟ್ಟಹುಡುಗ. ಮುಂದೆ ಬೆಳೆದು ಬಹು ದೊಡ್ಡ ವಿಜ್ಞಾನಿಯಾದ. ಅವನು ಹುಟ್ಟಿ ಬಾಳಿದುದು ಫ್ರಾನ್ಸಿನ ದಕ್ಷಿಣ ಭಾಗದಲ್ಲಿ. ಅದು ಬಹಳ ಸುಂದರವಾದ ಪ್ರದೇಶ. ನಮ್ಮ ಮಲೆನಾಡಿನ ಹಾಗೆ ಅಲ್ಲಿಯೂ ಬೆಟ್ಟ ಗುಡ್ಡಗಳು, ಕಾಡು ಎಲ್ಲ ಬಹಳ ಸೊಗಸು. ಬೆಟ್ಟಗಳೆಲ್ಲ ಶುಭ್ರವಾದ ಹಿಮದ ಟೋಪಿ ಹಾಕಿಕೊಂಡಿರುತ್ತವೆ. ಅಲ್ಲಿ ಹವ ಬೆಚ್ಚಗಿರುತ್ತದೆ. ಅಲ್ಲಲ್ಲೇ ಹಿಂದಿನ ಕಾಲದ ದೊಡ್ಡದೊಡ್ಡ ಸುಂದರ ಕಟ್ಟಡಗಳು. ಆ ಪ್ರದೇಶಗಳಲ್ಲಿ ಹೂವಿನದೇ ಸುಗ್ಗಿ. ಎಷ್ಟೆಷ್ಟು ವಿಧ ಅಂತೀರಿ....ಅವುಗಳ ಸೌಂದರ್ಯವನ್ನು ಯಾರೂ ಮರೆಯಲಾರರು. ಫೇಬರನಿಗೆ ಇವುಗಳನ್ನು ಕಂಡರೆ ತುಂಬ ಪ್ರೀತಿ. ಆದರೆ ಅವನು ಅಭ್ಯಾಸ ಮಾಡಿ ಕಂಡುಹಿಡಿದ ವಿಷಯಗಳು ತುಂಬಾ ಪುಟ್ಟಪುಟ್ಟ ಜೀವಿಗಳ ಕಥೆಗಳು. ಅವುಗಳಲ್ಲಿ ಅವನ ಆಸಕ್ತಿಗೆ ಕೊನೆ ಮೊದಲಿಲ್ಲ.



ಫೇಬರ್

ಆ ದೇಶದಲ್ಲಿ ಇಂದಿಗೂ ಅವನ ಮನೆಯನ್ನೂ, ಅದರ ಸುತ್ತ ಅವನು ಮಾಡಿಕೊಂಡಿದ್ದ ತೋಟವನ್ನೂ ಹಾಗೇ ಇಟ್ಟಿದ್ದಾರೆ. ಏನು ಸೊಗಸಾದ ತೋಟ. ಅಲ್ಲೆಲ್ಲ ಅವನ ಸ್ನೇಹಿತರಾಗಿದ್ದ ಆ ಪುಟ್ಟ ಜೀವಿಗಳೂ ಅವರ ಸಂತತಿಯವರೂ ಇನ್ನೂ ಜೀವಿಸುತ್ತಿದ್ದಾರೆ. ಅವರಿಗಾಗಿಯೇ ಮಾಡಿದ

ಉದ್ಯಾನ ಅದು. ಅಲ್ಲೇ ಒಂದು ಕಡೆ ಹಸಿರು ಹುಲ್ಲಿನ ಜಮಖಾನದ ಮಧ್ಯ ದಲ್ಲಿ ಇಂದಿಗೂ ಅವನದು ಒಂದು ಪ್ರತಿಮೆ ಇದೆ. ಅವನ ಆಕಾರ ಚಿಕ್ಕದು. ತೆಳ್ಳಗಿನ ಮುದುಕ. ಯಾವುದೋ ಹಳೆಯ ಕೋಟನ್ನು ಅಗಲವಾದ ಅರುಗಿನ ಹ್ಯಾಟನ್ನು ಹಾಕಿಕೊಂಡು ನಿಂತಿದ್ದಾನೆ. ಕೋಟಿನ ಜೇಬುಗಳೆಲ್ಲ ಅವನು ಸಂಗ್ರಹಿಸಿದ ಸಾಮಾನುಗಳಿಂದ ತುಂಬಿ ಹರಿದು ಹೋಗುವಂತೆ ಊದಿಕೊಂಡಿವೆ. ಸುಕ್ಕುಗಟ್ಟಿದ ಮುಖ. ತೆಳ್ಳಗಿನ ಚೂಪಾದ ಮೂಗು. ತೆಳ್ಳಗೆ ಬಿಗಿದುಕೊಂಡ ತುಟಿ. ಯಾವುದನ್ನೋ ಬಾಗಿ ತದೇಕ ಧ್ಯಾನದಿಂದ ನೋಡುತ್ತಿರುವ ಕಣ್ಣುಗಳು. ಇನ್ಯಾವುದನ್ನು ? ಅಲ್ಲೂ ಒಂದು ಕೀಟವನ್ನು ನೋಡುತ್ತಿದ್ದಾನೆ. ಯಾವುದೋ ಮುರಿದ ಮರದ ಪೊಟರೆಯೊಳಗಿರುವ ಸಣ್ಣ ಹಲ್ಲಿಯೊಂದನ್ನು ಪರೀಕ್ಷಿಸುತ್ತಿದ್ದಾನೆ. ಬಲಗೈಯಲ್ಲಿ ಕಟ್ಟು ಹಾಕಿದ ಸಣ್ಣ ಬೂದುಗಾಜು ಒಂದನ್ನು ಹಿಡಿದುಕೊಂಡು ಆ ಕೀಟದ ಮೇಲೆ ಬೆಳಕು ಸರಿಯಾಗಿ ಬೀಳುವಂತೆ ತನ್ನ ಕೋಟನ್ನು ಕಿವಿಯವರೆಗೂ ಎತ್ತಿ ಮರೆಮಾಡಿ ಹಿಡಿದು ನಿಂತಿದ್ದಾನೆ. ಆ ಹಿರಿಯ ವಿದ್ವಾಂಸ ತನ್ನ ಕೆಲಸದಲ್ಲಿ ತೊಡಗಿದ್ದಾಗ ಹಾಗೇ ಕಾಣುತ್ತಿದ್ದುದು. ಆ ಪ್ರತಿಮೆ ಜೀವಂತಮನುಷ್ಯನ ಹಾಗೇ ಕಾಣುತ್ತದೆ.

ಇದೆಲ್ಲ ಇರುವುದು ಸೆಂಟ್ ಲಿಯಾನ್ ಎಂಬ ಊರಿನಲ್ಲಿ. ಅಲ್ಲಿಯೇ ಅವನು ಹುಟ್ಟಿದ್ದು. ೧೮೨೩ ರ ಸೆಪ್ಟೆಂಬರ್ ೨೨ನೆಯ ತಾರೀಖು ಈ ಹೊಸ ಮಗುವಿಗೆ ಆ ಊರಿನ ಚರ್ಚಿನಲ್ಲಿ ಜೇನ್ ಹೆನ್ರಿ ಕ್ಯಾಸಿಮಿರ್ ಎಂದು ಹೆಸರಿಟ್ಟರು. ಮನೆಯಲ್ಲಿ ಬಡತನ ಜಾಸ್ತಿ. ಆದ್ದರಿಂದ ಅಲ್ಲೇ ಸ್ವಲ್ಪ ದೂರದ ಮಾಳವಾಲ್ ಎಂಬ ಹಳ್ಳಿಯ ಫೇಬರನ ತಾತ ಈ ಎಳೆಯ ಹುಡುಗನನ್ನು ತಮ್ಮ ಹಳ್ಳಿಗೆ ಕರೆದುಕೊಂಡು ಹೋದ. ಮನೆಯವರಿಗೆ ಒಬ್ಬನ ಪೋಷಣೆಯ ಭಾರ ತಪ್ಪಿ ಸ್ವಲ್ಪ ಉಸಿರಾಡುವಂತಾಯಿತು.

ಫೇಬರ್ ಆರು ವರ್ಷದ ಬಾಲಕನಾಗಿದ್ದಾಗ ಒಂದು ವಿಶೇಷ ನಡೆ ಯಿತು. ಒಂದು ದಿನ ಬೆಳಿಗ್ಗೆ ಅವನು ಸೂರ್ಯನನ್ನು ನೋಡುತ್ತ ನಿಂತಿ ದ್ದಾಗ ಅದರ ಥಳಥಳಿಸುವ ಬೆಳಕು ಇವನ ಮನಸ್ಸನ್ನು ಸೂರೆಗೊಂಡಿತು. ನಾನು ದೀಪದ ಹುಳು, ಸೂರ್ಯ ತನ್ನನ್ನು ಹತ್ತಿರಕ್ಕೆ ಸೆಳೆಯುವ ದೀಪ ಎಂದುಕೊಂಡ. ಸರಿ....ಈ ಪ್ರಕಾಶಮಾನವಾದ ಬೆಳಕನ್ನು ತಾನು ಅನು

ಭವಿಸುತ್ತಿರುವುದು ಬಾಯಿಂದಲೇ ಅಥವಾ ಕಣ್ಣಿನಿಂದಲೇ ಎಂದು ಅನುಮಾನವಾಯಿತು. ಪರೀಕ್ಷೆ ಮಾಡೋಣ ಎಂದು ಕಣ್ಣು ಮುಚ್ಚಿ ಬಾಯಿ ತೆರೆದಾಗ ಆ ಪ್ರಕಾಶಮಾನವಾದ ಬೆಳಕು ಎಲ್ಲಿ? ಇರಲೇ ಇಲ್ಲ. ಬಾಯಿಮುಚ್ಚಿ ಕಣ್ಣು ತೆರೆದಾಗ ಮಾತ್ರ ಬೆಳಕು ಪ್ರತ್ಯಕ್ಷವಾಯಿತು. ಓ ಹಾಗಾದರೆ ಆ ಬೆಳಕನ್ನು ಅನುಭವಿಸುವುದು ಕಣ್ಣುಗಳಿಂದ ಎಂದು ತೀರ್ಮಾನಿಸಿದ. ಈ ವಿಷಯವನ್ನು, ಅವನ ತಾತನ ಹತ್ತಿರ ಹೇಳಿದಾಗ ಆತ ಆ ಮಗುವಿನ ಮುಗ್ಧತೆಗೆ ನಕ್ಕ. ಆದರೆ ಬಂದ ಅನುಮಾನ? ಅದನ್ನು ಅವನು ಪರೀಕ್ಷಿಸಿ ಪರಿಹರಿಸಿದ ಬಗೆ. ಅದನ್ನು ಗಮನಿಸಿ, ಎಷ್ಟಾದರೂ ವಿಜ್ಞಾನಿಯಾಗಲಿರುವ ಹುಡುಗ ಅಲ್ಲವೆ!

ಆ ವಯಸ್ಸಿನಲ್ಲೇ ಅವನು ಇನ್ನೊಂದು ವಿಷಯವನ್ನು ಕಂಡುಹಿಡಿದ. ದಿನವೂ ಕತ್ತಲೆ ಆಗುವಾಗ ಗಿಡಪೊದೆಗಳ ಪಕ್ಕದಿಂದ ಒಂದು ತರಹದ ಟ್ರ....ಟ್ರೀ ಎನ್ನುವ ಶಬ್ದ ಬರುತ್ತಿತ್ತು. ಇದು ಆ ಹುಡುಗನ ಆಸಕ್ತಿಯನ್ನು ಕೆರಳಿಸಿತು. ಇಂತಹ ಶಬ್ದ ಯಾವುದರಿಂದ ಉಂಟಾಗುತ್ತದೆ? ಯಾವುದಾದರೂ ಹಕ್ಕಿ; ಗೂಡಿನಲ್ಲಿ ಕೂಗುತ್ತಿದೆಯೇ ? ಪರೀಕ್ಷೆ ಮಾಡಬೇಕು ಎಂದು ಹೊರಟ. ಆದರೆ ರಾತ್ರಿಯ ವೇಳೆಯಲ್ಲಿ ಕಾಡಿನಲ್ಲಿರುವ ತೋಳಗಳು ಅಲ್ಲೆಲ್ಲಾ ಬಂದು ಸುತ್ತುತ್ತವಲ್ಲ ಎಂಬ ಯೋಚನೆ, ಭಯ ಅವನನ್ನು ಹಿಂದಕ್ಕೆ ಜಗ್ಗಿತು. ಆದರೂ ಧೈರ್ಯ ಮಾಡಿ ಹೋದಾಗ ಆ ಶಬ್ದ ಸ್ವಲ್ಪ ಸದ್ದಾದರೂ ನಿಂತುಹೋಗುತ್ತಿತ್ತು. ಎರಡು ಮೂರು ದಿನ ಕಾದು ಕೊನೆಗೆ ಫಕ್ಕನೆ ಅದನ್ನು ಹಿಡಿದು ತಂದು ನೋಡಿದಾಗ ಅದು ಹುಲ್ಲುಮಿಡಿತೆ. ಅಂತೂ ಹುಲ್ಲು ಮಿಡಿತೆ ಹಾಡುತ್ತದೆ ಎನ್ನುವುದನ್ನು ಕಣ್ಣಾರೆ ನೋಡಿದಂತಾಯಿತು, ಕಿವಿಯಾರ ಕೇಳಿದ ಹಾಗಾಯಿತು.

ಫೇಬರನ ತಾತನ ಮನೆಯಲ್ಲಿ ಹೇಳಿಕೊಳ್ಳುವ ಸಿರಿತನವೇನೂ ಇರಲಿಲ್ಲ. ಇದ್ದಿದ್ದರಲ್ಲಿ ಅವನ ಅಜ್ಜಿ ಅವನನ್ನು ಸುಖವಾಗಿ ಬೆಳೆಸಿದಳು. ಪುಟ್ಟ ಫೇಬರನನ್ನು ಕಂಡರೆ ಅಜ್ಜಿಗೆ ಬಹಳ ಪ್ರೀತಿ. ದಿನವೂ ಊಟವಾದ ಮೇಲೆ ಮಕ್ಕಳನ್ನೆಲ್ಲ ಕೂಡಿಸಿಕೊಂಡು ಕಥೆ ಹೇಳುತ್ತಿದ್ದಳು. ಕಥೆ ಮುಗಿದ ಮೇಲೆ ಎಲ್ಲರೂ ಹುಲ್ಲಿನ ಹಾಸಿಗೆಯಲ್ಲಿ ಮಲಗುತ್ತಿದ್ದರು. ಎಲ್ಲರಿಗಿಂತ ಕಿರಿಯನಾದ ಫೇಬರನಿಗೆ ಮಾತ್ರ ಒಳ್ಳೆಯ ಹಾಸಿಗೆ ಇತ್ತು. ಆದರೆ ಇಂತಹ

ಯಾವ ಅನಾನುಕೂಲದಿಂದಲೂ ಮುಂದಿನ ಅವನ ಹಿರಿಮೆಗೆ ಕೊರತೆಯಾಗ ಲಿಲ್ಲ.

ಫೇಬರನಿಗೆ ಏಳುವರ್ಷಗಳು ತುಂಬಿದ ಮೇಲೆ ಅವನು ಶಾಲೆಗೆ ಸೇರಲು ತಂದೆ ತಾಯಂದಿರ ಊರಿಗೆ ಬಂದ. ಏಕೆಂದರೆ ಮಾಳವಾಲೆಯಲ್ಲಿ ಆಗ ಶಾಲೆಯಿರಲಿಲ್ಲ. ಪಾಪ, ಅವನಿಗೆ ಅಜ್ಜಿ ಮನೆಯನ್ನು ಬಿಟ್ಟು ಹೋಗು ವಾಗ ದುಃಖವಾಗಿರಬೇಕು.

ಅವನು ಅಕ್ಷರ ಕಲಿತ ಶಾಲೆ ಹೇಗಿತ್ತು ಗೊತ್ತೇ ನಿಮಗೆ? ಆ ಕೊಠ ಡಿಗೆ ಯಾವ ಹೆಸರಿಡುವುದೂ ಕಷ್ಟವೇ. ಯಾಕೆಂದರೆ ಅಲ್ಲಿ ನಡೆಯುತ್ತಿದ್ದ ಕೆಲಸಗಳು ಒಂದಲ್ಲ ಎರಡಲ್ಲ. ಅದು ಶಾಲೆಯಾಗಿತ್ತು, ಅಡುಗೆ ಮನೆಯಾ ಗಿತ್ತು, ಊಟದ ಮನೆಯಾಗಿತ್ತು, ಮಲಗುವ ಕೊಠಡಿಯಾಗಿತ್ತು, ಕೋಳಿಯ ಗೂಡಾಗಿತ್ತು, ಜೊತೆಗೆ ಹಂದಿಯ ಲಾಯವೂ ಆಗಿತ್ತು. ಆಗಿನ ಕಾಲದಲ್ಲಿ ಶಾಲೆ ನಡೆಸುವುದಕ್ಕೆ ಅರಮನೆಯಂಥ ಕಟ್ಟಡಗಳನ್ನು ಉಪಯೋಗಿ ಸುತ್ತಿರಲಿಲ್ಲ. ಸಣ್ಣದೊಂದು ಮುರುಕುಗುಡಿಸಲೇ ಸಾಕಾಗುತ್ತಿತ್ತು. ಫೇಬರ್ ಓದಿದ ಶಾಲೆಯಂತೂ ಹುಲ್ಲಿನ ಕಂತೆಗಳಿಂದ, ಪಾತ್ರೆ ಪದಾರ್ಥಗಳಿಂದ ತುಂಬಿತ್ತು. ಊರಿನಾಚೆಗಿದ್ದ ಆ ಶಾಲೆಗೆ ಅಥವಾ ಕೊಠಡಿಗೆ ಒಂದೇ ಒಂದು ಕಿಟಕಿ. ಆದರೆ ಆ ಪುಟ್ಟ ಕಿಟಕಿಗೆ ಇಡೀ ಹಳ್ಳಿಯೇ ಕಾಣುತ್ತಿತ್ತು.

ಈಗ ಆ ಹಳ್ಳಿಯಲ್ಲಿ ಶಾಲೆಗೆ ಸೊಗಸಾದ, ಶುಭ್ರವಾದ ಕಟ್ಟಡವಿದೆ. ಆದರೆ ಆ ಹಿಂದಿನ ಶಾಲೆ ಹೇಗಿದ್ದರೂ ಅದು ಒಬ್ಬ ಹಿರಿಯ ವಿಜ್ಞಾನಿ ಅಕ್ಷರ ಕಲಿತ ಶಾಲೆ!

ಆ ಹಿಂದಿನ ಶಾಲೆಯಲ್ಲಿ ಪಾಠ ನಡೆಯುವಾಗ ಪಾತ್ರೆಗಳಲ್ಲಿ ಕೊತಪತ ಎಂದು ಅಡಿಗೆ ತಯಾರಾಗುತ್ತಿತ್ತು. ಅಲ್ಲಿನ ವಿದ್ಯಾರ್ಥಿಗಳೆಲ್ಲ ಪಾಠ ದುದ್ದಕ್ಕೂ ಏನಾದರೂ ತಿನ್ನುತ್ತಲೇ ಇರುತ್ತಿದ್ದರು. ಕೆಲವು ಗಟ್ಟಿಗ ಹುಡುಗರಂತೂ ಮಾಸ್ತರು ಸ್ವಲ್ಪ ಆ ಕಡೆ ಈ ಕಡೆ ತಿರುಗಿದಾಗ ಪಾತ್ರೆಯಲ್ಲಿ ಬೇಯುತ್ತಿದ್ದ ಆಲೂಗಡ್ಡೆಗಳಲ್ಲಿ ಒಂದನ್ನು ಸರ್ರನೆ ಎಳೆದು ತಮ್ಮ ರೊಟ್ಟಿಗೆ ನಂಚಿಕೊಳ್ಳುತ್ತಿದ್ದರು. ಇವುಗಳ ಜೊತೆಗೆ ಬಾಗಿಲು ಹಾಕುವು ದನ್ನೇನಾದರೂ ಮರೆತಿದ್ದರೆ, ಹಂದಿಗಳೂ, ಅವುಗಳ ಮರಿಗಳೂ ಡ್ರೊಙ್ಕ ಟ್ರೊಂಯ್ಕ್ ಎನ್ನುತ್ತಾ ಒಳಗೆ ಬಂದುಬಿಡುತ್ತಿದ್ದವು. ಹುಡುಗರು ಅಲ್ಲಲ್ಲಿ

ಎರಚಿದ್ದ ತಿಂಡಿಗಳನ್ನು ತಿನ್ನಲಾರಂಭಿಸುತ್ತಿದ್ದವು. ಮಾಸ್ತರು ಅವು ಗಳನ್ನು ಹೊರಕ್ಕೆ ಓಡಿಸುವಷ್ಟರಲ್ಲಿ ಫೇಬರ್ ಅವುಗಳ ಥಳಥಳಿಸುವ ಕಣ್ಣು ಗಳನ್ನೂ, ಸುರುಳಿ ಸುತ್ತಿದ ಬಾಲವನ್ನೂ ನೋಡಿ ಆನಂದಿಸುತ್ತಿದ್ದ. ನಂತರ ಕೋಳಿಯ ಸರದಿ. ಅದು ತನ್ನ ಮಕ್ಕಳು ಮರಿಗಳನ್ನೆಲ್ಲಾ ಕಟ್ಟಿ ಕೊಂಡು ತಿಂಡಿ ಆರಿಸಿಕೊಳ್ಳಲು ಶುರು ಮಾಡುತ್ತಿತ್ತು. ಹೆನ್ರಿ ಅದರ ನುಣುಪಾದ ಬೆನ್ನನ್ನು ಮೆಲ್ಲಗೆ ತಟ್ಟಿ ಆನಂದಿಸುತ್ತಿದ್ದ. ಈ ಆನಂದಕ್ಕಾ ಗಿಯೇ ಆ ಹುಡುಗರು ಸಾಧ್ಯವಾದಷ್ಟು ಸಲ ಕೊಠಡಿಯ ಬಾಗಿಲನ್ನು ಮುಚ್ಚಲು ಮರೆಯುತ್ತಿದ್ದರಂತೆ.

ಪಾಠವಾದ ಮೇಲೆ ವಿದ್ಯಾರ್ಥಿಗಳೆಲ್ಲ ಅವರ ಮಾಸ್ತರಿಗೆ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿಕೊಡುತ್ತಿದ್ದರು. ಪಾರಿವಾಳದ ಗೂಡು ಚೊಕ್ಕಟ ಮಾಡುವುದು, ಹಂದಿಯ ಲಾಯ ಗುಡಿಸುವುದು, ಬಸವನ ಹುಳು ತರು ವುದು ಹೀಗೆ....ಅಲ್ಲದೆ ಇನ್ನೊಂದು ಸೊಗಸಾದ ವಿಷಯ ಎಂದರೆ, ಉಪಾ ಧ್ಯಾಯರು ಚರ್ಚಿನ ಗಂಟೆ ಬಾರಿಸುವ ಕೆಲಸವನ್ನೂ ಮಾಡಬೇಕಾಗಿದ್ದುದ ರಿಂದ, ಊರಲ್ಲಿ ಹಬ್ಬವೋ, ಮದುವೆಯೋ ಆದರೆ, ಅವತ್ತು ಶಾಲೆಗೆ ರಜಾ ಬಂದುಬಿಡುತ್ತಿತ್ತು.

" ಓ....ಅದೀಗ ಒಳ್ಳೆಯ ಮಜ...." ಚಿಟಿಕೆ ಹಾಕಿದ ಸೀನು.

"ಪಾಠದ ವಿಷಯ ಏನೂ ಹೇಳಲೇ ಇಲ್ಲವಲ್ಲ ?" ಕೇಳಿದಳು ವಸಂತಿ.

"ಹೂಂ, ಹೌದು. ಅಲ್ಲಿ ಕಾಗುಣಿತ ಕಲಿಯುವವರಿಂದ ಹಿಡಿದು ಲೆಕ್ಕಮಾಡಿ ಪಾಠ ಓದುವವರವರೆಗೆ ಎಲ್ಲರೂ ಒಂದೇ ಕೊಠಡಿಯಲ್ಲಿ ಕುಳಿ ತಿರುತ್ತಿದ್ದರು. ಲೆಕ್ಕ ಅಂದರೆ ಕೂಡೋದು, ಕಳೆಯೋದು, ಗುಣಿಸೋದು, ಬಾಗಿಸೋದು ಅಷ್ಟೆ. ಆಗ ಫ್ರಾನ್ಸಿನಲ್ಲಿ ದಶಮಾಂಶ ಪದ್ಧತಿ ಲೆಕ್ಕವೇ ಇರಲಿಲ್ಲ."

" ಈಗಲೂ ಅದ್ಯಾವ ಪುಣ್ಯಾತ್ಮ ಆದನ್ನು ಆರಂಭಿಸಿ ಬಿಟ್ಟನೋ...." ಕೊರಗಿದ ಸೀನು.

ಶ್ರೀಮತಿ ನಗುತ್ತಾ ಮುಂದುವರೆಸಿದಳು : " ಅಲ್ಲದೆ ಮೊದಲನೇ ಕ್ಲಾಸಿನ ಹುಡುಗರಿಗೆ ಮಗ್ಗಿ ಕಲಿಸುವಾಗ ನಾಲ್ಕನೆಯ ಕ್ಲಾಸಿನ ಹುಡುಗ ಒಂದೊಂದು ಸಾಲಾಗಿ ಹೇಳುತ್ತಿದ್ದ. ಕ್ಲಾಸಿನವರೆಲ್ಲ ಅವನು ಹೇಳಿ

ಕೊಟ್ಟಂತೆ ಪುನಃ ಹೇಳುತ್ತಿದ್ದರು. ಆ ಗಲಾಟೆಗೆ ಹೆದರಿ ಹಂದಿಗಳೂ, ಕೋಳಿಗಳೂ ಎಲ್ಲ ದಿಕ್ಕಾಪಾಲಾಗಿ ಓಡಿಬಿಡುತ್ತಿದ್ದುವು."

"ಓ!...."

"ಊಂ....ಆಮೇಲೆ"

"ಆ ಮೇಲೆ, ಅವರಿಗೆ ಚರಿತ್ರೆ, ಭೂಗೋಳ, ಪ್ರಕೃತಿ ಪಾಠ ಯಾವುದೂ ಇರಲೇ ಇಲ್ಲ...."

"ಹಾಗಾದರೆ ಈ ಕೀಟಗಳ ವಿಷಯಕ್ಕೆ ಫೇಬರನಿಗೆ ಆಸಕ್ತಿ ಬಂದದ್ದು ಹೇಗೆ?" ಎಂದ ಬಾಲು.

"ಅದೇ ಅವನ ಜೀವನದಲ್ಲಿ ಒಂದು ಸಮಸ್ಯೆ. ಅವನೇ ಅದನ್ನು ಬಿಡಿಸಲು ಪ್ರಯತ್ನ ಪಟ್ಟಿದ್ದಾನೆ. ಶಾಲೆಯಲ್ಲಿ ಪಾರಿವಾಳದ ಗೂಡನ್ನು ಚೊಕ್ಕಟಮಾಡುವ ಕೆಲಸ ಎಷ್ಟೋ ಸಲ ಅವನ ಪಾಲಿಗೆ ಬೀಳುತ್ತಿತ್ತು. ಆಗ ಅವನು ಅವುಗಳ ದುಂಡುಕಣ್ಣುಗಳನ್ನೂ, ಅವುಗಳ ಸುತ್ತ ಇರುವ ತೆಳ್ಳಗಿನ ಗೆರೆಗಳನ್ನೂ ನೋಡಿ ಅವು ತನ್ನನ್ನು ನೋಡಿ ನಗುತ್ತಿವೆ ಎಂದುಕೊಳ್ಳುತ್ತಿದ್ದ. ಅವುಗಳ ಪುಕ್ಕಗಳನ್ನು ಎಣಿಸುತ್ತಾ ಇವು ಎಷ್ಟು ಬಣ್ಣ ಬಣ್ಣದ ಮುಗಿಲುಗಳ ಮಧ್ಯೆ ಹಾರಾಡಿ ಆನಂದಪಟ್ಟಿವೆಯೋ ಎಂದುಕೊಳ್ಳುತ್ತಿದ್ದ. ಅವು ಲೀಲಾಜಾಲವಾಗಿ ತನ್ನ ಊರಿನ ಸುತ್ತ ಇರುವ ಬೀಚ್ ಮರಗಳ ಕಾಡನ್ನು ದಾಟುತ್ತವೆ. ಅಲ್ಲಿಂದಾಚೆಗೆ ಮಂಜಿನ ಕವಚ ತೊಟ್ಟಿರುವ ಪರ್ವತಗಳ ಮೇಲಕ್ಕೆ ಹಾರಿ, ತಮ್ಮ ಪುಟ್ಟ ಕೆಂಪುಕಾಲಿನಿಂದ ನಕ್ಷತ್ರದಂತಹ ಮುದ್ರೆ ಒತ್ತಿ ಬರುತ್ತದೆ ಎಂದು ಕನಸು ಕಾಣುತ್ತಿದ್ದ. ಉಪಾಧ್ಯಾಯರಿಗಾಗಿ ಬಸವನ ಹುಳುಗಳನ್ನು ಆರಿಸಿ ತರುವಾಗಲೂ ಅಷ್ಟೆ. ಕಂದು, ಬಿಳಿ, ಗುಲಾಬಿ ಬಣ್ಣದ ಆ ಜೀವಿಗಳನ್ನು ನೋಡಿ ಆಶ್ಚರ್ಯ ಪಡುತ್ತಿದ್ದ. ಮೈ ಉದ್ದಕ್ಕೂ ಕಪ್ಪು ಉಂಗುರಗಳನ್ನು ತೊಡಿಸಿದಂತೆ ಕಾಣುವ ಆ ಜೀವಿಗಳಲ್ಲೆಲ್ಲಾ ಅತ್ಯಂತ ಸುಂದರವಾದುವನ್ನು ಆರಿಸಿ ತನ್ನ ಜೇಬಿನಲ್ಲಿ ತುಂಬಿ ಪುರಸತ್ತಾದಾಗಲೆಲ್ಲ ತೆಗೆದು ತೆಗೆದು, ನೋಡಿ ಹಿಗ್ಗುತ್ತಿದ್ದ.

ಒಣಹುಲ್ಲು ಸರಿಮಾಡುವಾಗ ಸಿಗುತ್ತಿದ್ದ ಕೆಲವು ಜೀರುಂಡೆಗಳು, ಕಪ್ಪೆಗಳು ಆಕಾಶಕ್ಕಿಂತ ನೀಲಿಯಾಗಿರುತ್ತಿದ್ದುವು. ಅವನ್ನು ನೋಡಿ ಫೇಬರನಿಗೆ ಆಶ್ಚರ್ಯವೋ ಆಶ್ಚರ್ಯ. ಹಾಡುವ ಚಿಮ್ಮಂಡೆಗಳನ್ನು ನೋಡಿ

ಕೆಲವಕ್ಕೆ ನೀಲಿ, ಕೆಲವಕ್ಕೆ ಕೆಂಪು ರೆಕ್ಕೆಗಳಿವೆಯಲ್ಲ ಏಕೆ ಎಂಬ ಯೋಚನೆ ಅವನಿಗೆ.

ಒಟ್ಟನಲ್ಲಿ ಅವನೇ ಹೇಳುವಂತೆ ಯಾವ ಗುರುವಿನ ಸಹಾಯವೂ ಇಲ್ಲದೆ ಪ್ರಾಣಿಗಳ ಮತ್ತು ಸಸ್ಯಗಳ ಮೇಲಿನ ಹುಚ್ಚು ಅವನಿಗೆ ತಾನೇ ತಾನಾಗಿ ಬೆಳೆಯಿತು. ಹೀಗೇ ಅವನ ಹುಚ್ಚು. ಹಾಗೆಯೇ ಅವನ ಜೀವನದಲ್ಲಿ ನಡೆದ ಕೆಲವು ಘಟನೆಗಳು ಅವನ ಆಸಕ್ತಿಯನ್ನು ರೂಪಿಸಿದುವು. ಅವನು ಅಕ್ಷರ ಕಲಿಯುವಾಗ ಅವನ ತಂದೆ ಪೇಟೆಯಿಂದ ಒಂದು ವರ್ಣಮಾಲೆ ತಂದು ಕೊಟ್ಟರು. ಒಂದೊಂದು ಅಕ್ಷರಕ್ಕೂ ಒಂದೊಂದು ಪ್ರಾಣಿಯ ಅರ್ಥವೇ ಇದೆ ಎನ್ನಿಸಿ ಪುಟ್ಟ ಫೇಬರ್ ಬೇಗ ಬೇಗನೆ ಓದಿ ಬರೆಯಲು ಕಲಿತ. ಅವನ ಬುದ್ಧಿವಂತಿಕೆಗೆ ಮೆಚ್ಚಿ ಅವನ ತಂದೆ ಲಾ ಫಾಂಟೇನ್ ಎಂಬ ಕವಿ ಬರೆದ ಕಥೆಗಳ ಪುಸ್ತಕವನ್ನು ಬಹುಮಾನವಾಗಿ ಕೊಟ್ಟ. ಆ ಪುಸ್ತಕದ ತುಂಬ ಪುಟ್ಟ ಪುಟ್ಟ ಪ್ರಾಣಿಗಳ ಕಥೆಗಳೇ. ಅಂದಿನಿಂದ ಫೇಬರ್ ಆ ಪುಸ್ತಕಕ್ಕೆ ಬಲವಾಗಿ ಗಂಟು ಬಿದ್ದ.

ಫೇಬರನ ಓದುವ ಕೋಣೆಗೆ ಕಿಟಕಿಯ ಮೂಲಕ ಒಂದು ಸಣ್ಣ ಬೆಟ್ಟದ ತುದಿ ಕಾಣುತ್ತಿತ್ತು. ಫೇಬರನಿಗೆ ಅಲ್ಲೇನಿದೆಯೋ ನೋಡಬೇಕು ಎನ್ನಿಸಿತು. ಆ ತುದಿಯಲ್ಲಿರುವ ಡೊಂಕು ಡೊಂಕಾದ ಮರವನ್ನೇ ಗುರಿಯಾಗಿಟ್ಟುಕೊಂಡು ಹೊರಟ. ಹೋಗುತ್ತಿರುವಾಗ ದಾರಿಯಲ್ಲಿ ಒಂದು ಪುಟಾಣಿ ಹಕ್ಕಿ ಅಲ್ಲೇ ಬಂಡೆಯಿಂದ ಬಂಡೆಗೆ ಹಾರಾಡುತ್ತಾ ಕಾಲ ಕಳೆಯುತ್ತಿತ್ತು. ಹಾಗೇ ನಿಂತು ಅದನ್ನು ನೋಡಿದ ಫೇಬರ್. ನಿಧಾನವಾಗಿ ಅದು ಹಾರಾಡುತ್ತಿದ್ದ ಸ್ಥಳದ ಹತ್ತಿರಕ್ಕೆ ಹೋದ. ಅಲ್ಲೇನಿತ್ತು ಗೊತ್ತೆ? ಹಕ್ಕಿಯ ಗೂಡು. ಫೇಬರ್ ಹಕ್ಕಿಯ ಗೂಡನ್ನು ನೋಡಿದ್ದು ಅದೇ ಮೊದಲು. ಅದರಲ್ಲಿ ಒಂದಷ್ಟು ಮೊಟ್ಟೆಗಳಿದ್ದವು. ಅಲ್ಲಿ ಫೇಬರ್ ಹುಷಾರಾಗಿ ಕೈ ಹಾಕಿ ಒಂದೇ ಒಂದು ಮೊಟ್ಟೆಯನ್ನೆತ್ತಿ ಜೇಬಿನಲ್ಲಿಟ್ಟುಕೊಂಡ. ದಾರಿಯುದ್ದಕ್ಕೂ ಅದನ್ನು ಪದೇ ಪದೇ ತೆಗೆದು ನೋಡಿಕೊಳ್ಳುತ್ತಾ ಬರುತ್ತಿರುವಾಗ, ದಾರಿಯಲ್ಲಿ ಚರ್ಚಿನ ಪಾದ್ರಿಗಳು ಸಿಕ್ಕಿದರು.

"ಏನದು ನಿನ್ನ ಕೈಯಲ್ಲಿ?" ಎಂದು ಕೇಳಿದರು.

ಫೇಬರ್ ತುಂಬಾ ಸಂಕೋಚದಿಂದ ತನ್ನ ಅಂಗೈಯನ್ನು ಬಿಡಿಸಿ ತೋರಿಸಿದ.

“ಓಹ್ ಕಲ್ಲು ಕುಟಿಗನ ಮೊಟ್ಟೆ, ಎಲ್ಲಿತ್ತು ?” ಫೇಬರ್ ನಡೆದುದನ್ನೆಲ್ಲ ವಿವರಿಸಿದ.

ಅದಕ್ಕೆ ಅವರು, ಹಾಗೆಲ್ಲ“ ಹಕ್ಕಿಗಳಿಗೆ ಅವುಗಳ ಮಕ್ಕಳಿಗೆ ತೊಂದರೆ ಮಾಡಬಾರದು ಮಗು. ಇನ್ನು ಮೇಲೆ ಮಾಡುವುದಿಲ್ಲ ತಾನೆ ?” ಎಂದು ಹೇಳಿದರು.

ಫೇಬರ್ ಹೂಂ ಎಂದು ಮಾತು ಕೊಟ್ಟು ಮನೆ ಕಡೆ ಹೊರಟ. ಹಕ್ಕಿಗಳಿಗೂ ಹೆಸರಿದೆ ಎನ್ನುವುದು ಫೇಬರನಿಗೆ ಅವತ್ತೇ ಅಂತೆ ತಿಳಿದದ್ದು. ಬಹುಶಃ ಹೀಗೇ ಮೀನುಗಳಿಗೂ, ಇತರ ಪ್ರಾಣಿಗಳಿಗೂ ಇದೆಯೋ ಏನೋ ಎಂದುಕೊಳ್ಳುತ್ತ ಮನೆ ಸೇರಿದ.

ಅವರ ಮನೆಯಲ್ಲಿ ಬಡತನ ದಿನದಿನಕ್ಕೂ ಹೆಚ್ಚಲಾರಂಭಿಸಿತು. ಬಾತುಕೋಳಿಗಳನ್ನು ಸಾಕಿ ಆ ಉದ್ಯಮದಿಂದ ಸ್ವಲ್ಪ ಹಣ ಗಳಿಸೋಣ ಎಂದು ಅವನ ತಂದೆ ತಾಯಿಗಳು ಯೋಚಿಸಿದರು. ಅವನ್ನು ಹಳ್ಳಿಯ ಕೆಳಗಿನ ಕಣಿವೆಯ ಕೊಳದಲ್ಲಿ ಈಜಾಡಿಸುವ ಅವಕಾಶ ಫೇಬರನಿಗೆ ಸಿಕ್ಕಿತು. ಬಾತುಗಳನ್ನು ಕೊಳದಲ್ಲಿ ಈಜಾಡಲು ಬಿಟ್ಟು, ತಾನು ಗುಂಡುಕಲ್ಲುಗಳನ್ನು, ಬಸವನ ಹುಳುಗಳನ್ನು, ಕಪ್ಪೆಯ ಮರಿಗಳನ್ನು ಆರಿಸಿ ಜೋಬು ಹರಿಯುವವರೆಗೂ ತುಂಬಿಕೊಂಡು ಸಂಜೆ ಬಾತುಗಳೊಡನೆ ಮನೆಗೆ ಬರುತ್ತಿದ್ದ ಫೇಬರ್. ಅದಕ್ಕೆ ಅವನ ತಾಯಿ ‘ ಹುಡುಗನಿಗೆ ಯಾರೋ ಮಾಟ ಮಾಡಿಸಿದ್ದಾರೆ. ಅದಕ್ಕೇ ಅವನು ದಡ್ಡನಂತೆ ಕೆಲಸಕ್ಕೆ ಬಾರದ ಸಾಮಾನುಗಳನ್ನು ತುಂಬಿಕೊಂಡು ಬಟ್ಟೆ ಹರಿದುಕೊಳ್ಳುತ್ತಾನೆ ’ ಎಂದು ಪೇಚಾಡುತ್ತಿದ್ದಳು. ಇತ್ತ ಫೇಬರ್ ಲ್ಯಾಟಿನ್ ಕಲಿಯುತ್ತಾ ಅಲ್ಲಿಯೂ ಕಪ್ಪೆ ಮುಂತಾದುದಕ್ಕೆ ಬೇರೆ ಬೇರೆ ಹೆಸರಿರುವುದನ್ನು ಕಂಡ. ಲ್ಯಾಟಿನಿನಲ್ಲೂ ಹೆಸರಿರಬೇಕಾದರೆ ಇವುಗಳ ಯೋಗ್ಯತೆ ಇನ್ನೆಷ್ಟಿದ್ದೀತು ಎಂದು ಫೇಬರನಿಗೆ ಆಶ್ಚರ್ಯವಾಯಿತು.

## ದುರದೃಷ್ಟದ ದಿನಗಳು

ಮನೆಯಲ್ಲಿ ದಿನದಿನಕ್ಕೂ ತಾಪತ್ರಯಗಳು ಬೆಳೆಯುತ್ತಲೇ ಹೋದುದರಿಂದ ಬೇರೆಯ ದೊಡ್ಡ ಊರಿಗೆ ಹೋಗಿ ಹೋಟೆಲಿಡೋಣ ಎಂದು ಫೇಬರಿನ ತಂದೆ ತೀರ್ಮಾನಿಸಿದರು. ಮನೆಯ ಸಾಮಾನನ್ನೆಲ್ಲ ಚಕ್ಕಡಿಯ ಮೇಲೆ ಹೇರಿ ರೋಡೆಸ್ ಪಟ್ಟಣಕ್ಕೆ ಹೊರಟರು. ಚರ್ಚಿನ ಪ್ರಾರ್ಥನೆಯಲ್ಲಿ ಸೇವೆಕೆಲಸಕ್ಕೆ ಒಪ್ಪಿದುದರಿಂದ ಅವನಿಗೆ ಶಾಲೆಯಲ್ಲಿ ಉಚಿತ ಶಿಕ್ಷಣ ದೊರೆಯಿತು. ಕೆಂಪು ಟೋಪಿ ಹಾಕಿಕೊಂಡು, ಕೆಂಪನೆಯ ಬಿಗಿಯಾದ ನಿಲುವಂಗಿಯ ಮೇಲೆ ಸಡಿಲವಾದ ಬಿಳಿಯ ಉದ್ದಗೌನು ಹಾಕಿಕೊಂಡು ವೇಳೆಗೆ ಸರಿಯಾಗಿ ಚರ್ಚಿನ ಗಂಟೆ ಬಾರಿಸುವ ಕೆಲಸ ಅವನದಾಗಿತ್ತು. ಇತರ ಮೂವರು ಹುಡುಗರೊಡನೆ ವೇದಿಕೆಯ ಮೇಲೆ ಬಂದು ಲ್ಯಾಟನಿನ ಮಂತ್ರಗಳನ್ನು ಹೇಳಬೇಕಾಗುತ್ತಿತ್ತು. ಆದರೆ ಉಳಿದವರು ಹೇಳುವಾಗ ಫೇಬರ್ ನಾಚಿಕೆಯಿಂದ ನಡುಗುತ್ತಾ ಸುಮ್ಮನಿದ್ದು ಬಿಡುತ್ತಿದ್ದನಂತೆ.

ರೋಡೆಸಿನಲ್ಲಿ ಫೇಬರ್, ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳನ್ನು ಚೆನ್ನಾಗಿ ಕಲಿತ. ಗ್ರೀಕಿನ ಪುರಾಣಗಳಿಗಿಂತ ಲ್ಯಾಟಿನ್ ಭಾಷೆಯ ವರ್ಜಿಲನ ಕಾವ್ಯ ಅವನಿಗೆ ಬಹಳವಾಗಿ ಹಿಡಿಸಿತು. ಅದರಲ್ಲಿ ದುಂಬಿ, ತಿತ್ತಿರಿ, ಕಾಗೆ, ಪಾರಿವಾಳ ಮುಂತಾದುವುಗಳ ವಿಷಯವನ್ನು ಘನವಾದ ಪದ್ಯಗಳಲ್ಲಿ ಬರೆದಿತ್ತು.

ಆದರೆ ಫೇಬರನ ತಂದೆಗೆ ಹೋಟೆಲಿನಲ್ಲೂ ನಷ್ಟವೇ ಆಗಿ ಅವರೆಲ್ಲ ಟೊಲೂಸ್ ಎಂಬ ಊರಿಗೆ ಹೋದರು. ಅಲ್ಲೂ ಅವರ ಉದ್ಯಮಕ್ಕೆ ನಷ್ಟವೇ ಕಾದಿತ್ತು. ಐದನೆಯ ಫಾರಂ ಓದಿ ಮುಗಿಸಿದ ಫೇಬರನಿಗೆ ಜೀವನಕ್ಕಾಗಿ ದುಡಿಯುವ ಪರಿಸ್ಥಿತಿ ಬಂದಿತು. ದ್ರಾಕ್ಷಿಯ ತೋಟಗಳಲ್ಲಿ, ಅಂಗಡಿ ಬೀದಿಗಳಲ್ಲಿ, ಸಣ್ಣ ಪುಟ್ಟ ಕೂಲಿಕೆಲಸ ಮಾಡುತ್ತ ಫೇಬರ್ ಅರೆಹೊಟ್ಟೆಯಲ್ಲಿ ಎಷ್ಟೋ ದಿನ ಹಸಿವೇ ಕಾಲ ಕಳೆಯುತ್ತಿದ್ದ. ಅಂತಹ ಕಷ್ಟದಲ್ಲೂ ಎದೆಗುಂದದೆ ಗೆಲುವಾಗಿ ಓಡಾಡುವ ಅವನ ಕಣ್ಣಿಗೆ ಪುಟ್ಟದೊಂದು ದುಂಬಿಯೋ, ಜೀರುಂಡೆಯೋ ಬಿದ್ದರೂ ಸಾಕು, ಅವನಿಗೆ ಪ್ರಪಂಚದ ಪರಿವೆಯೇ ಇರುತ್ತಿರಲಿಲ್ಲ. ಹರ್ಷ ಅವನ ಮನಸ್ಸನ್ನು ತುಂಬಿ ಅವನಿಗೆ ಉತ್ಸಾಹ ಉಂಟಾಗುತ್ತಿತ್ತು.

ಒಂದು ದಿನ ಫೇಬರ್ ಹೋಗುತ್ತಿರುವಾಗ ಅಂಗಡಿಯಲ್ಲಿ ಯಾವುದೋ ಪದ್ಯ ಸಂಗ್ರಹವೊಂದು ಕಣ್ಣಿಗೆ ಬಿತ್ತು. ಆಗ ದಿನವೆಲ್ಲ ಕಷ್ಟಪಟ್ಟು ಸಂಪಾದಿಸಿದ ಕೆಲವು ಆಣೆಗಳು ಮಾತ್ರ ಜೇಬಿನಲ್ಲಿ ಇದ್ದುವು. ಫೇಬರ್ ಆ ಪುಸ್ತಕವನ್ನು ಕೊಂಡುಕೊಂಡ. ಅದರ ಫಲವಾಗಿ ಅವನಿಗೆ ಅಂದು ಉಪವಾಸವಾದರೂ ಪದ್ಯಗಳನ್ನು ಓದುವ ಆನಂದದಲ್ಲಿ ಅವನು ಹಸಿವಿನ ಸಂಕಟವನ್ನು ಮರೆತನಂತೆ.

ಪದ್ಯಗಳು ಮತ್ತು ಕೀಟಗಳ ಮೇಲಿನ ಈ ಪ್ರೀತಿ ಅವನನ್ನು ಕೊನೆಯವರೆಗೂ ಮುಂದೆ ಬಿಡಲಿಲ್ಲ. ಮುಂದೆ ತಾನು ಕಂಡ ಪ್ರಾಣಿಗಳ ಜೀವನವನ್ನು ಹಾಡಾಗಿ ಕಟ್ಟಿ, ಮಕ್ಕಳಿಗೆ ಕಲಿಸುತ್ತಿದ್ದ. ವೃದ್ಧಾಪ್ಯದಲ್ಲಿ ಮಕ್ಕಳ ಎಳೆಯ ಕಂಠದಿಂದ ತಾನೇ ಕಟ್ಟಿದ ಆ ಹಾಡುಗಳನ್ನು ಕೇಳಿ ಆನಂದಿಸುತ್ತಿದ್ದ.

# ಪ್ರಯೋಗಶಾಲೆ

ಅಲ್ಲಿಂದ ಮುಂದೆ ಫೇಬರ್ ‘ ಅವಿನಾನ್ ’ ಎಂಬ ಊರಿಗೆ ಹೊರಟ. ಅಲ್ಲಿಯ ವಿಶ್ವವಿದ್ಯಾನಿಲಯದಲ್ಲಿ ವಿಜ್ಞಾನ ಕಲಿಯಬೇಕು ಎಂದವನ ಆಸೆ. ಆದರೆ ಅದಕ್ಕೆ ತಕ್ಕ ಹಣವಾಗಲಿ, ಅನುಕೂಲವಾಗಲಿ ಇರಲಿಲ್ಲ. ಹಾಗೂ ಹೀಗೂ ಎನ್‌ಟ್ರೆನ್ಸ್ ಪರೀಕ್ಷೆಗೆ ಕಟ್ಟಿದ. ಆ ಪರೀಕ್ಷೆಯಲ್ಲಿ ಅವನು ಎಷ್ಟು ಚೆನ್ನಾಗಿ ಮಾಡಿದನೆಂದರೆ ಅದರಿಂದ ಅವನಿಗೊಂದು ವಿದ್ಯಾರ್ಥಿವೇತನ ಸಿಕ್ಕಿತು. ಹೀಗಾಗಿ ಕಾಲೇಜಿನಲ್ಲಿ ಓದುವಾಗ ಎರಡು ವರ್ಷಗಳ ಕಾಲ ಅವನಿಗೆ ಊಟಕ್ಕೂ, ಇರುವ ಸ್ಥಳಕ್ಕೂ ತೊಂದರೆಯಿಲ್ಲದಂತಾಯಿತು. ಆದರೆ ಬಟ್ಟೆಬರೆಗಳಿಗೇನು ಮಾಡಿದನೋ ದೇವರೇ ಬಲ್ಲ.

ಕಾಲೇಜಿನಲ್ಲಿ ಕಲಿಯಲು ಅವನಿಗೆ ರಸಾಯನಶಾಸ್ತ್ರ ಸಿಗಲಿಲ್ಲ, ಆದರೆ ಭೌತಶಾಸ್ತ್ರ ಮಾತ್ತ ಇತ್ತು. ಅದರಲ್ಲಿ ಅವರು ಏನೇನು ಕಲಿಸಿದರು ಗೊತ್ತೆ? ಏಪ್ರಿಲ್ ತಿಂಗಳಿನ ಚಂದ್ರ, ಬೀಳುವ ಮಂಜು, ಇಬ್ಬನಿ, ಗಾಳಿ ಮುಂತಾದ ಚಿಲ್ಲರೆ-ಪಲ್ಲರೆ ವಿಷಯಗಳನ್ನು ಕಲಿಸಿದರು. ಪವನಶಾಸ್ತ್ರದ ಈ ವಿಭಾಗದಿಂದ ಊರಿನ ರೈತರ ಜೊತೆಯಲ್ಲಿ ಮಳೆಬೆಳೆಗಳ ವಿಷಯ ಮಾತಾಡಬಹುದಾಗಿತ್ತು ಅಷ್ಟೆ.

“ ಪವನಶಾಸ್ತ್ರ ಅಂದರೆ ? ” ಕೇಳಿದ ಬಾಲು.

“ ಅಂದರೆ ಹವಾಮಾನವನ್ನು ಕುರಿತ ಶಾಸ್ತ್ರ. ಗಾಳಿ, ಮಳೆ ಮುಂತಾದುವನ್ನು ಕುರಿತು ಅದರಲ್ಲಿ ಹೇಳುತ್ತಾರೆ. ಅಲ್ಲಿನ ಇತರ ಪಾಠ ಗಳನ್ನು ಕುರಿತು ಅವನು ಬರೆಯುತ್ತಾ.... ‘ ನಮ್ಮ ಪಾಠಗಳಲ್ಲಿ ಪ್ರಕೃತಿ ಶಾಸ್ತ್ರದ ಸುಳಿವೇ ಇರಲಿಲ್ಲ. ಸಸ್ಯಗಳ ಬಗ್ಗೆ ಒಂದು ಮಾತೂ ಇರಲಿಲ್ಲ. ಅಷ್ಟೊಂದು ಸ್ವಾರಸ್ಯವಾದ ಕೀಟಗಳ ಬಗ್ಗೆ ಏನೂ ಇರಲಿಲ್ಲ. ಕಲ್ಲುಗಳು ? ಅದೂ ಕಾಣೆ. ಆದರೆ ಪ್ರಕೃತಿಯ ಪರಿಚಯಕ್ಕೆ ಇವಕ್ಕಿಂತ ಸೊಗಸಿನ ಗವಾಕ್ಷಗಳು ಬೇಕೆ.... ? ನಮಗಿದ್ದುದೆಲ್ಲಾ ಆ ನಿರ್ಜೀವ ವ್ಯಾಕರಣ....’ ಎಂದು ಕೊರಗಿದ್ದಾನೆ.

ಆದರೆ, ರಸಾಯನ ಶಾಸ್ತ್ರವೆಂದರೇನು ? ಅದರಲ್ಲಿ ಏನು ಕಲಿಸು

ತ್ತಾರೆ ಎಂದು ತಿಳಿಯಲು ಫೇಬರನಿಗೆ ಬಹಳ ಕುತೂಹಲ. ಅದನ್ನು ತಿಳಿದು ಕೊಳ್ಳಬೇಕು ಎಂಬ ಆಸೆಯಿಂದ ಎಷ್ಟೋಬಾರಿ ಅವನು ರಸಾಯನ ಶಾಸ್ತ್ರದ ಕಟ್ಟಡದ ಕಿಟಕಿಗಳಲ್ಲಿ ಇಣುಕಿ ನೋಡುತ್ತಿದ್ದ. ಎಷ್ಟು ಕತ್ತು ಉದ್ದಮಾಡಿಕೊಂಡು ನೋಡಿದರೂ ಅಲ್ಲಿ ಕಾಣುತ್ತಿದ್ದುದು ಬರಿಯ ಗಾಜಿನ ಪ್ರನಾಳಗಳು, ಬೀಕರುಗಳು, ಬಣ್ಣ ಬಣ್ಣದ ಸೀಸೆಗಳು.

ವರ್ಷದ ಕೊನೆಯಲ್ಲಿ ಒಂದು ದಿನ, ಅವರ ಗಣಿತಶಾಸ್ತ್ರದ ಪ್ರಾಧ್ಯಾಪಕರು, ವಿದ್ಯಾರ್ಥಿಗಳ ಸಂತೋಷಕ್ಕಾಗಿ ರಸಾಯನಶಾಸ್ತ್ರದ ಭವನಕ್ಕೆ ಅವರನ್ನೆಲ್ಲ ಕರೆದುಕೊಂಡು ಹೋಗಿ, ಆಮ್ಲಜನಕದ ತಯಾರಿಕೆಯನ್ನು ತೋರಿಸಲು ಒಪ್ಪಿದರು. ಪ್ರಯೋಗಶಾಲೆಯ ಅಧಿಕಾರಿಗಳ ಒಪ್ಪಿಗೆ ಪಡೆದು ಇವರನ್ನೆಲ್ಲ ಮಾರನೆಯ ದಿನ ಬರಹೇಳಿದರು. ಹಿಂದಿನ ದಿನ ರಾತ್ರಿಯೆಲ್ಲ ಫೇಬರನಿಗೆ ನಿದ್ರೆಯೇ ಬರಲಿಲ್ಲ. ಅವನಿಗೆ ಅಷ್ಟೊಂದು ಕುತೂಹಲ ಮತ್ತು ಉತ್ಸಾಹ.

ಮಾರನೆಯ ದಿನ ಎಲ್ಲರೂ ಇದ್ದುದರಲ್ಲಿ ಒಳ್ಳೆಯ ಬಟ್ಟೆ ಧರಿಸಿ ಹೊರಟರು. ಪ್ರಯೋಗಶಾಲೆಯನ್ನು ಸೇರಿ ಮೇಜಿನ ಸುತ್ತ ಕಿಕ್ಕಿರಿದರು. ಫೇಬರ್ ಸ್ವಲ್ಪ ದೂರದಲ್ಲಿ ಎತ್ತರವಾದ ಜಾಗ ನೋಡಿ ನಿಂತ. ಅಲ್ಲಿದ್ದ ಬಣ್ಣಬಣ್ಣದ ದ್ರಾವಕ ಮತ್ತು ಚಿತ್ರವಿಚಿತ್ರ ಸೀಸೆಗಳನ್ನು ನೋಡುತ್ತಾ ನಿಂತ. ಆಗ ಇದ್ದಕ್ಕಿದ್ದಂತೆ ಟಭಾರ್ ಎಂಬ ಶಬ್ದ ಕೇಳಿಬಂತು. ನೋಡಿದರೆ, ಎಲ್ಲರೂ ಒದ್ದಾಡುತ್ತಿದ್ದಾರೆ. ಕೆಲವರಂತೂ ನೋವಿನಿಂದ ಅರಚುತ್ತಿದ್ದಾರೆ. ಭಟ್ಟಿಪಾತ್ರೆ ಸಿಡಿದು ಎಲ್ಲ ದಿಕ್ಕಿಗೂ ಕುದಿಯುವ ದ್ರಾವಣ ಎರಚಾಡಿದೆ. ಗೋಡೆಯ ಮೇಲೆಲ್ಲ ಅದರ ಕಲೆಗಳು ಬಿದ್ದಿವೆ. ಹೆಚ್ಚುಕಡಿಮೆ ಫೇಬರನ ಜೊತೆಗಾರರೆಲ್ಲರಿಗೂ ದ್ರಾವಣದ ಸೇವೆ ಆಗಿದೆ. ಒಬ್ಬ ಬಡಪಾಯಿಗಂತೂ ಮುಖ, ಮೂಗು, ಕಣ್ಣಿಗೆಲ್ಲ—ಆ ದ್ರಾವಣ ಎರಚಿ ಅವನು ವಿಲಿವಿಲಿ ಒದ್ದಾಡುತ್ತಾ ಚೀರುತ್ತಿದ್ದಾನೆ. ಅವನನ್ನು ಫೇಬರ್ ಅವರಲ್ಲೇ ಸ್ವಲ್ಪ ವಾಸಿಯಾಗಿದ್ದವನ ಸಹಾಯದಿಂದ ಬಾಗಿಲಾಚೆಗಿರುವ ನೀರಿನ ಚಿಲುಮೆಯ ಬಳಿಗೆ ಕರೆದುಕೊಂಡು ಹೋಗಿ, ಆ ನೀರಿನಲ್ಲಿ ಅದ್ದಿದ. ಬೇಗ ಬೇಗ ಅವನನ್ನು ತೊಳೆದ ಮೇಲೆ ಆ ಹಿಂಸೆ ಸ್ವಲ್ಪಕಡಿಮೆಯಾಗಿ ಆ ಹುಡುಗ ತಾನೇ ತೊಳೆದುಕೊಳ್ಳಲಾರಂಭಿಸಿದ. ಆದರೆ ಡಾಕ್ಟರುಗಳು ಪರವಾಗಿಲ್ಲ

ಬದುಕುತ್ತಾನೆ ಎಂದು ಹೇಳುವುದಕ್ಕೆ ಹದಿನೈದು ದಿನಗಳೇ ಬೇಕಾಯಿತು. ಫೇಬರ್ ದೂರ ನಿಂತಿದ್ದರಿಂದ ಹೆಚ್ಚು ಗಾಬರಿಯಾಗದೆ ಅನುಕೂಲವೇ ಆಯಿತು.

ಫೇಬರ್ ಮತ್ತೆ ಒಳಗೆ ಹೋದಾಗ ಅಲ್ಲಿನ ದೃಶ್ಯವೇನೂ ಸಂತೋಷ ಕಾರಿಯಾಗಿರಲಿಲ್ಲ. ಉಪಾಧ್ಯಾಯರ ಬಟ್ಟೆಗಳೆಲ್ಲ ಸುಟ್ಟುಹೋಗಿದ್ದುವು. ಅವರು ತಮ್ಮ ಕೋಟು ಷರಾಯಿಗಳನ್ನೆಲ್ಲ ಕಿತ್ತೆಸೆದು ಬೇಗ ಬೇಗನೇ ಶಿಷ್ಯರ ಕೋಟುಗಳಲ್ಲಿ ಒಂದನ್ನು ಏರಿಸಿಕೊಳ್ಳುತಿದ್ದರು. ಹೇಗಾದರೂ ಮಾಡಿ ಮನೆ ಸೇರಬೇಕಲ್ಲ.

ಉಳಿದವರು ಅನ್ಯೋನ್ಯಿಯದಲ್ಲಿ ತಮ್ಮ ಕೈ ಚೌಕಗಳನ್ನು ಅದ್ದಿ ಬಟ್ಟೆ ಗಳ ಮೇಲಿನ ಕೆಂಪು ಕಲೆಯನ್ನು ಒರೆಸಿಕೊಳ್ಳುತಿದ್ದರು. ಆದರೆ ಆಮ್ಲ ಜನಕ ....? ಅದು ಸಿಗಲೇ ಇಲ್ಲ. ಒಂದಲ್ಲ ಒಂದು ದಿನ ಅದನ್ನು ಕಾಣಲೇ ಬೇಕು ಎಂದುಕೊಂಡು ಫೇಬರ್.

# ಕಾರ್ಪೆಂಟ್ರಾಸಿನ ಶಾಲೆ

ಫೇಬರನಿಗೆ ಕಾರ್ಪೆಂಟ್ರಾಸಿನ ಶಾಲೆಯೊಂದರಲ್ಲಿ ಕೆಲಸ ಸಿಕ್ಕಿತು. ಆಗಿನ್ನು ಫೇಬರನಿಗೆ ಹದಿನೆಂಟೇ ವರುಷ. ಆ ಕಾರ್ಪೆಂಟ್ರಾಸ್ ಸೊಗಸಾದ ಊರು. ಅಲ್ಲಿ ಎಲ್ಲೆಲ್ಲೂ ದೈತ್ಯಾಕಾರದ ಮರಗಳು, ಅವೆಲ್ಲ ಹಣ್ಣು ಹೂವಿನಿಂದ ತುಂಬಿ ತೂಗಾಡುತ್ತಿದ್ದುವು. ಸುತ್ತಮುತ್ತ ಆಕಾಶವನ್ನು ಮುಟ್ಟುವ ಪರ್ವತಗಳು ನಿಂತಿದ್ದುವು. ಅವುಗಳ ಸೌಂದರ್ಯವನ್ನು ಯಾರೂ ಮರೆಯುವ ಹಾಗಿಲ್ಲ. ಅಂತೂ ಒಟ್ಟನಲ್ಲಿ ಭಂಗಾರದಂತಹ ಊರು. ಈಗ ಅಲ್ಲಿ ಫೇಬರನ ಹೆಸರಿಗೆ ಒಂದು ಕಾಲೇಜು ಕಟ್ಟಿದ್ದಾರೆ. ಅಲ್ಲಿನ ವಿದ್ಯಾರ್ಥಿಗಳಿಗಂತೂ ತಾವು ಹೆನ್ರಿ ಫೇಬರನ ಕಾಲೇಜಿನವರು ಎಂದೇ ಹೆಮ್ಮೆ.

ಫೇಬರ್ ಅಲ್ಲಿ ಪಾಠಹೇಳುತ್ತಿದ್ದ ಕಾಲದಲ್ಲಿ, ಆಗತಾನೆ ಅಕ್ಷರ ಕಲಿಯುವ ಎಳೆಯ ಹುಡುಗರಿಂದ ಹಿಡಿದು ಯಾವ ಕೆಲಸಕ್ಕೂ ಬಗ್ಗದ ಧಾಂಡಿಗ ಹುಡುಗರವರೆಗೂ ಬರುತ್ತಿದ್ದರು. ಅವರಲ್ಲಿ ಎಷ್ಟೋ ಜನ ಫೇಬರನ ಓರಗೆಯವರು. ಅವರೆಲ್ಲರನ್ನೂ ಒಂದೇ ಕೊಠಡಿಯಲ್ಲಿ ಕೂಡಿಸಿ ಪಾಠ ಹೇಳಬೇಕಾಗಿತ್ತು. ಅವರನ್ನೆಲ್ಲ ನೋಡಿ ಬೋನಿನಲ್ಲಿ ಕೂಡಿದ ದುಷ್ಟ ಪ್ರಾಣಿ ನೆನಪು ಅವನಿಗಾಗುತ್ತಿತ್ತಂತೆ.

ಶಾಲೆಯಲ್ಲಿ ವಿಜ್ಞಾನಕ್ಕೆ ಒಂದು ಸುಸಜ್ಜಿತ ಕೊಠಡಿ ಇತ್ತು. ಅಲ್ಲಿ ಅವನ ಶಿಷ್ಯರಿಗೆಲ್ಲ ರಸಾಯನಶಾಸ್ತ್ರ ಕಲಿಸಬೇಕು ಎಂದು ಅವನ ಮನಸ್ಸು. ಏಕೆಂದರೆ ಅವನ ಶಿಷ್ಯರಲ್ಲಿ ಎಷ್ಟೋ ಜನ ಹಳ್ಳಿಗಳಿಂದ ಬಂದಿದ್ದರು. ಅವರಿಗೆ ರಸಾಯನಶಾಸ್ತ್ರದಿಂದ ಬಹಳ ಉಪಯೋಗವಾಗುತ್ತಿತ್ತು. ಏಕೆಂದರೆ ಅದರಲ್ಲಿ ಮಣ್ಣಿನ ವಿಷಯ, ಅದರ ಗುಣಗಳು, ಗಿಡದ ಬೆಳವಣಿಗೆಯ ಆವಶ್ಯಕತೆಗಳು ಮುಂತಾದ ವಿಷಯಗಳೆಲ್ಲಾ ಇರುತ್ತವೆ. ಇನ್ನೂ ಕೆಲವರಿಗೆ ಬಣ್ಣದ ಕಸುಬಿದ್ದರೆ; ಬಣ್ಣಗಳು ಮತ್ತು ಅವುಗಳನ್ನು ಮಾಡುವ ವಿಧಾನ, ಅವುಗಳಲ್ಲಿ ಉತ್ತಮ ಯಾವುದು, ಕೆಟ್ಟದು ಯಾವುದು ಮುಂತಾದ ವಿಷಯವೂ ರಸಾಯನ ಶಾಸ್ತ್ರದಲ್ಲಿದೆ. ಅಲ್ಲದೆ ಲೋಹದ ಕೆಲಸಗಾರರು, ಸೋಪು ತಯಾರು ಮಾಡುವವರಿಗೂ ಇದುಬೇಕು. ಮಾಂಸ, ಹಣ್ಣು,

ಕಾಯಿಗಳನ್ನು ಮಾರುವವನು ಅವುಗಳು ಕೆಡದಂತೆ ಇಡುವ ವಿಧಾನವನ್ನು ಇಲ್ಲಿ ಕಲಿಯಬಹುದು. ಚರ್ಮ ಹದಮಾಡುವವರಿಗೂ ಈ ಶಾಸ್ತ್ರ ತುಂಬಾ ಉಪಯೋಗಕರ.

ಫೇಬರನ ಶಿಷ್ಯರು ದಿನದಿನಕ್ಕೂ ಇಂತಹ ಪಾಠಗಳಲ್ಲಿ ತಲ್ಲೀನರಾದರು. ಅವರಿಗೆ ಈ ಹುಡುಗ ಉಪಾಧ್ಯಾಯನಲ್ಲಿ ತುಂಬ ಕುತೂಹಲ. ಅವನ ಡ್ರಾಯರಿನಲ್ಲಿ ಏನಿರಬಹುದು ? ಎಂದು ಒಂದು ದಿನ ಆ ಹುಡುಗರು ನೋಡಿದಾಗ ಅಲ್ಲಿ ಕೆಲವು ದುಂಬಿಗಳು, ಕಣಜಗಳು, ಒಂದೆರಡು ಜೀರುಂಡೆಗಳು ಇದ್ದುವು.

ಅದಷ್ಟೇ ಫೇಬರನ ಹವ್ಯಾಸ. ಊರಿನ ಸ್ವಲ್ಪ ಹೊರಭಾಗದಲ್ಲಿ ಒಂದು ತಗ್ಗಿನ ದಾರಿಯಿದೆ. ಅದೇ ಫೇಬರನ ಪ್ರಯೋಗಶಾಲೆ. ಎಂದಿನಂತೆ ಫೇಬರ್ ಅಲ್ಲಿ ಕುಳಿತು ಕಣಜವನ್ನೋ ಅಥವಾ ಬೇರೆ ಯಾವುದಾದರೂ ಕೀಟವನ್ನೋ ನೋಡುತ್ತಾ ಕುಳಿತಿರುತ್ತಿದ್ದ. ಆ ದಾರಿಯಲ್ಲಿ ಬೆಳಗ್ಗೆ ಅಷ್ಟು ಹೊತ್ತಿಗೆ, ಎದ್ದು, ದ್ರಾಕ್ಷಿಯ ತೋಟಗಳಿಗೆ ಹೋಗುತ್ತಿದ್ದ ಹೆಂಗಸರು ಸಂಜೆ ತಿರುಗಿ ಬರುವಾಗಲೂ ಅವನು ಅಲ್ಲೇ ಕುಳಿತಿರುವುದನ್ನು ನೋಡಿ "ಅಯ್ಯೋ ಪಾಪ, ಯಾರೋ ಮರುಳು. ದಿನವೆಲ್ಲ ಕಲ್ಲನ್ನೇ ದುರುಗುಟ್ಟಿಕೊಂಡು ನೋಡುತ್ತಾ ಕುಳಿತಿದ್ದಾನೆ. ಇದೆಲ್ಲಾ ಭಗವಂತನ ಲೀಲೆ." ಎಂದು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು. ದಿನವೆಲ್ಲಾ ಬಿಸಿಲಿನ ತಾಪವನ್ನು ಸಹಿಸಿ ಹಾಗೆ ಅಲುಗಾಡದೆ ಕುಳಿತು, ಯಾವುದೋ ಜೀವಿಯನ್ನು ಗಮನಿಸುತ್ತ ಇರುವಾಗ, ಅದರ ಜೀವನದ ಯಾವುದೋ ಅಂಶ ಇನ್ನೇನು ಗೊತ್ತಾಗುತ್ತದೆ ಎನ್ನುವಾಗ, ಆ ದಾರಿಯಲ್ಲಿ ಬರುವ ಸೈನಿಕರ ಸಪ್ಪಳ ಅಥವಾ ಎಳೆಯ ಬಾಲಕರ ನಗೆ ಅಥವಾ ಕಾಲಿನ ತಪ್ಪು ಹೆಜ್ಜೆ ಆ ಸೂಕ್ಷ್ಮ ಜೀವಿಯನ್ನು ಗಾಬರಿಗೊಳಿಸಿ ಓಡಿಸಿ ಬಿಡುತ್ತಿತ್ತು. ಅದರಿಂದ, ದಿನವೆಲ್ಲ ಕಾಯ್ದು ಕುಳಿತ ಫೇಬರನ ಸಹನೆ ಅಷ್ಟೂ ವ್ಯರ್ಥವಾಗುತ್ತಿತ್ತು. ಕೆಲವು ಬಾರಿ ಇನ್ನೇನು ಯಾವುದೋ ಜೀವಿಯ ಸ್ವಭಾವ ವ್ಯಕ್ತವಾಗುತ್ತದೆ. ಎನ್ನುವ ವೇಳೆಗೆ ಫೇಬರನನ್ನು ಯಾರಾದರೂ ಮಾತಾಡಿಸಿ ತೊಂದರೆ ಮಾಡುತ್ತಿದ್ದರು. ಕೆಲವು ಜನರಂತೂ ಅವನು ಯಾವುದೋ ಮಾಟ ಮಂತ್ರಗಳಲ್ಲಿ ಮಗ್ನನಾಗಿದ್ದಾನೆ ಎಂದು ಅಪಾರ್ಥ ಮಾಡುತ್ತಿದ್ದರು.

ಒಮ್ಮೆಯಂತೂ ಪೋಲಿಸಿನವನು ಅನುಮಾನಾಸ್ಪದವಾದ ರೀತಿಯಲ್ಲಿ ಫೇಬರ್ ಅಲೆದಾಡುತ್ತಿದ್ದ ಎಂದು ಹೇಳಿ ಸ್ಟೇಷನ್ನಿಗೆ ಹಿಡಿದುಕೊಂಡು ಹೊರಟೇಬಿಟ್ಟಿದ್ದ.

"ಆಮೇಲೆ?" ಸೀನುವಿಗೆ ಯೋಚನೆ ಹತ್ತಿತು.

"ಆಮೇಲೇನು ಪೆಚ್ಚು ಮುಖ ಹಾಕಿಕೊಂಡು, 'ಕ್ಷಮಿಸಿ ಸ್ವಾಮಿ ತಪ್ಪಾಯಿತು' ಅಂತ ಗೊಣಗಿಕೊಂಡು ಹಿಂದಕ್ಕೆ ಕಳಿಸ್ತಾರೆ" ಎಂದು ವಸಂತಿ ತೀರ್ಮಾನಿಸಿ, "ಮುಂದೇನಾಯಿತು?" ಎಂದಳು.

"ಆಗಿದ್ದೂ ಹಾಗೆಯೇ. ಈ ಸಮಯದಲ್ಲಿ ಕೀಟಶಾಸ್ತ್ರದ ಮೇಲಿನ ಪುಸ್ತಕವೊಂದು ಫೇಬರನ ಕಣ್ಣಿಗೆ ಬಿದ್ದಿತ್ತು. ಅದರ ಬೆಲೆ ಅವನ ಇಡೀ ಒಂದು ತಿಂಗಳ ಸಂಬಳ! ಆದರೂ ಅವನು ಆ ಪುಸ್ತಕವನ್ನು ಕೊಂಡು ಕೊಂಡು ಒಂದು ಸಾಲನ್ನೂ ಬಿಡದೆ ಓದಿ ಪೂರೈಸಿದ. ಇಲ್ಲಿಂದ ಮುಂದೆ ಕೀಟಗ್ಗಳ ಮೇಲಿನ ಅವನ ಆಸಕ್ತಿ ಒಂದಕ್ಕೆ ನಾಲ್ಕಾಗಿ ಬೆಳೆಯಿತು. ಅವನ ನಿರೀಕ್ಷಣಾ ಶಕ್ತಿಗೆ ಏನು ಕೊಟ್ಟರೂ ಸಾಲದು. ಅದನ್ನು ನೋಡಿ ಪ್ರಸಿದ್ಧ ವಿಜ್ಞಾನಿ ಚಾರ್ಲ್ಸ್ ಡಾರ್ವಿನ್ "ಅದ್ವಿತೀಯನಾದ ವೀಕ್ಷಕ" ಎಂದು ಮನದಣಿಯ ಹೊಗಳಿದ್ದಾನೆ.

ಕೆಲವು ವರ್ಷಗಳು ಹೀಗೆಯೇ ಕಳೆದು ಹೋದುವು. ಎಲಿಮೆಂಟರಿ ಶಾಲೆಗಳಲ್ಲಿ ಕಲಿಯುವುದಕ್ಕಿಂತ ಸ್ವಲ್ಪ ಹೆಚ್ಚು ಓದಿ ಪದವೀಧರನಾಗಿ ಸೆಕೆಂಡರಿ ಶಾಲೆಗಳಲ್ಲಿ ಅಥವಾ ಕಾಲೇಜಿನಲ್ಲಿ ಉಪಾಧ್ಯಾಯನಾಗುವುದು ಅನುಕೂಲ ಎಂದು ಭಾವಿಸಿ ಫೇಬರ್ ಅದರ ಸಿದ್ಧತೆಗೆ ತೊಡಗಿದ. ಪರೀಕ್ಷೆಗೆ ರಸಾಯನಶಾಸ್ತ್ರ, ಭೌತಶಾಸ್ತ್ರ, ಮತ್ತು ಗಣಿತಶಾಸ್ತ್ರಗಳನ್ನು ಆರಿಸಿಕೊಂಡ. ಎಂದಿನಂತೆ ಸ್ವಂತವಾಗಿ ವ್ಯಾಸಂಗವನ್ನು ಪ್ರಾರಂಭಿಸಿದ. ಗಣಿತಶಾಸ್ತ್ರದ ನಾನಾ ವಿಧದ ಸಮಸ್ಯೆಗಳನ್ನು ಅವನು ಹೇಗೆ ಬಿಡಿಸಿಕೊಂಡನೋ ಆಶ್ಚರ್ಯ. ರಸಾಯನ, ಭೌತ ಶಾಸ್ತ್ರಗಳಿಗೆ ಪ್ರಯೋಗ ಶಾಲೆಯ ಸಹಾಯ ವಿಲ್ಲದೆ ಎಷ್ಟು ಪಾಡು ಪಟ್ಟನೋ!

ಅವನಿಗೆ ಇವೆಲ್ಲಕ್ಕಿಂತ ಕಷ್ಟವಾದ ವಿಷಯ ಅಂದರೆ ಪ್ರಕೃತಿಶಾಸ್ತ್ರ ದಿಂದ ಮನಸ್ಸನ್ನು ಹಿಂತಿರುಗಿಸುವುದು. ಪ್ರಕೃತಿಶಾಸ್ತ್ರ ಅವನ ಮನಸ್ಸನ್ನು ತುಂಬಿಕೊಂಡಿತ್ತು, ಆಳುತ್ತಿತ್ತು. ಅದನ್ನು ದೂರತಳ್ಳುವ ಇಚ್ಛೆಯಿಂದ

ಪ್ರಕೃತಿಶಾಸ್ತ್ರದ ಪುಸ್ತಕಗಳನ್ನೆಲ್ಲ ಪೆಟ್ಟಿಗೆಯ ತಳದಲ್ಲಿ ಹಾಕಿದನಂತೆ. ದಾರಿಯಲ್ಲಿ ಒಂದು ದುಂಬಿಯೋ, ಹುಲ್ಲುಗರಿಕೆಯೋ ಸಿಕ್ಕಿದಾಗ ಕಷ್ಟದಿಂದ ಮುಖ ಬೇರೆ ಕಡೆಗೆ ತಿರುಗಿಸಿಕೊಳ್ಳುತ್ತಿದ್ದನಂತೆ. ಆಗ ಅವನ ಮನಸ್ಸಿಗಾಗುತ್ತಿದ್ದ ಹಿಂಸೆ ಅಷ್ಟಿಷ್ಟಲ್ಲ. ಪರೀಕ್ಷೆಗಾಗಿ ವ್ಯಾಸಂಗ, ಜೊತೆಗೆ ಶಾಲೆಯ ಕೆಲಸ ಇವುಗಳಲ್ಲಿ ಫೇಬರನಿಗೆ ಬಿಡುವೇ ಸಿಗುತ್ತಿರಲಿಲ್ಲ. ಅಂಥದರಲ್ಲಿ ಇಂಜನಿಯರಿಂಗ್ ಪರೀಕ್ಷೆಗೆ ಕಟ್ಟಿದ್ದ ಯುವಕನೊಬ್ಬ ಬಂದು ತನಗೆ ಬೀಜಗಣಿತ ಕಲಿಸಿಕೊಡಿ ಎಂದು ಅವನನ್ನು ಕೇಳಿದ. ಮಾಲುಗಣ್ಣಿನವನು ಕುರುಡನನ್ನು ದಾರಿ ತೋರಿಸು ಎಂದಂತಾಯಿತು. ಫೇಬರನಿಗೆ ಬೀಜಗಣಿತದ ತಲೆ ಬಾಲ ತಿಳಿದಿರಲಿಲ್ಲವಾದರೂ ಕಲಿಸಿ ಕೊಡುವುದಾಗಿ ಒಪ್ಪಿಯೇ ಬಿಟ್ಟ. ನಾಳೆಯಿಂದ ಪಾಠ ಆರಂಭವಾಗಬೇಕು.

ಈಗೇನು ಮಾಡಬೇಕು ? ಇಂತಹ ಕಷ್ಟಗಳಿಗೆಲ್ಲ ಅವನನ್ನು ಸಿಕ್ಕಿಸುತ್ತಿದ್ದುದು, ಎಷ್ಟು ಕಲಿತರೂ ತೀರದ, ಇನ್ನೂ ಕಲಿಯಬೇಕೆಂಬ ಆಸೆ. ಹೇಳಿಕೊಡುವ ನೆಪದಲ್ಲಿ ಅದನ್ನೂ ಕಲಿಯೋಣ ಎನ್ನುವ ಮನಸ್ಸು ಅವನದು. ಅವನಿಗೆ ಸ್ವಲ್ಪವೂ ತಿಳಿಯದ ವಿಷಯವಾದ್ದರಿಂದ ರುಚಿ ಇನ್ನೂ ಹೆಚ್ಚು. ಈ ಗುಟ್ಟು ಆ ವಿದ್ಯಾರ್ಥಿಗೆ ತಿಳಿಯಬಾರದುದರಿಂದ ನಾಡಿದ್ದಿನಿಂದ ಪಾಠಕ್ಕೆ ಬಾ ಎಂದು ಬಿಟ್ಟ.

ಆ ವಿದ್ಯಾರ್ಥಿ ಆ ಕಡೆ ಹೋದ ಮೇಲೆ ಫೇಬರನಿಗೆ ವಿವೇಕ ಹುಟ್ಟಿತು. ಇರುವುದು ಒಂದೇ ದಿನದ ಅವಕಾಶ. ಸಾಲದ್ದಕ್ಕೆ ಬೀಜಗಣಿತದ ಪುಸ್ತಕ ಕೂಡ ಅವನ ಹತ್ತಿರವಿಲ್ಲ. ಊರಿನ ಪುಸ್ತಕದಂಗಡಿಯಲ್ಲಿ ಅಂತಹ ಪುಸ್ತಕಗಳು ಖಂಡಿತ ಇರುವುದಿಲ್ಲ. ಹೇಳಿದರೂ ಅವನು ತರಿಸುವುದು ಒಂದು ವಾರ ಆಗುತ್ತದೆ. ಒಳ್ಳೆಯ ಪೀಕಲಾಟಕ್ಕೆ ಬಂತು. ಆ ಯುವಕನನ್ನು ಕರೆದು ಪಾಠ ಹೇಳುವುದಿಲ್ಲ ಎಂದುಬಿಡಲೇ ಎನ್ನಿಸಿತು ಒಂದು ಕ್ಷಣ. ಆದರೆ ಫೇಬರ್ ಹಿಡಿದ ಕೆಲಸ ಬಿಡುವವನೆ? ವಿಜ್ಞಾನದ ಅಧ್ಯಾಪಕರ ಹತ್ತಿರ ಬೀಜಗಣಿತದ ಪುಸ್ತಕ ಇರಬಹುದು ಎಂದು ಕೊಳ್ಳುತ್ತಾ ಅದರ ಬೇಟೆಗೆ ಹೊರಟ. ಆದರೆ ಆ ಮಾಸ್ಟರು ಇಲ್ಲದ ಸಮಯದಲ್ಲಿ ಪುಸ್ತಕ ಹಾರಿಸಿಕೊಂಡು ಬರಬೇಕು ! ಏಕೆಂದರೆ ಅವರಿಗೆ ಫೇಬರನನ್ನು ಕಂಡರೆ ಅಷ್ಟಕ್ಕಷ್ಟೆ. ಅವರು ನಿನಗೇಕೆ ಬೀಜಗಣಿತದ ಪುಸ್ತಕ ಎಂದಾಗ ಇವನು ಹೇಳಬೇಕಾಗಿ ಬರುತ್ತದೆ.

ಹೇಳಿದರೆ ಇವನನ್ನು ಅರೆಹುಚ್ಚು ಎಂದು ಭಾವಿಸದೆ ಬಿಡುವುದಿಲ್ಲ. ಅಲ್ಲದೆ ಇತರ ಸಹೋದ್ಯೋಗಿಗಳಿಗೂ ಇದನ್ನು ಹೇಳಿ, ಎಲ್ಲರೂ ಬಿದ್ದು ಬಿದ್ದು ನಗುವಂತೆ ಮಾಡುತ್ತಾನೆ. ಇಷ್ಟಾದರೂ ಪುಸ್ತಕ ಸಿಗುವ ಭರವಸೆಯಿಲ್ಲ. ಆದ್ದರಿಂದ ಆ ಮಾಸ್ಟರು ಇಲ್ಲದಾಗ ಅವನ ಬೀರುವಿನ ಬಾಗಿಲನ್ನು ತೆರೆದು ಅರ್ಧ ಅಡಿ ದಪ್ಪದ ಬೀಜಗಣಿತದ ಪುಸ್ತಕವನ್ನು ಫೇಬರ್ ತೆಗೆದ. ಅದನ್ನು ತರುವಾಗ ತಲೆತಿರುಗಿದಂತಾಗಿ ಮನಸ್ಸಿನಲ್ಲೇ ಮಾಡುತ್ತಿರುವ ಅನ್ಯಾಯಕ್ಕೆ ಕೊರಗುವಂತಾದರೂ ಹೇಗೋ ಪುಸ್ತಕವನ್ನು ಮನೆಗೆ ತಂದು ಯಾವುದೋ ಹಾಳೆಯನ್ನು ಸುಮ್ಮನೆ ತೆಗೆದಾಗ, ನ್ಯೂಟನ್ನಿನ ಬೈನಾಮಿಯಲ್ ಪ್ರಮೇಯ ಅವನ ಕಣ್ಣಿಗೆ ಬಿದ್ದಿತು. ಅದುವರೆಗೆ ಫೇಬರ್ ಆ ಹೆಸರನ್ನು ಕೇಳಿಯೇ ಇರಲಿಲ್ಲವಾದ್ದರಿಂದ, ಏನು ಹೀಗೆಂದರೆ? ನೋಡೋಣವೆಂದುಕೊಂಡು ಓದಲು ಪ್ರಾರಂಭಿಸಿದ. ಲೇಖನಿ ತೆಗೆದುಕೊಂಡು ಆ ಪ್ರಮೇಯವನ್ನು ಬಿಡಿಸಿದ. ಅವನಿಗೆ ಅದೊಂದು ಆಟದಂತೆ ಕಂಡಿತು. ಅದರಲ್ಲೇ ಮಗ್ನನಾಗಿಬಿಟ್ಟ. ಮಾರನೆಯ ದಿನ ಆ ಹೊಸ ಶಿಷ್ಯ ಬಂದಾಗ ಫೇಬರನಿಗೆ ಬೀಜಗಣಿತ ಎಂದರೇನೋ ಗೊತ್ತೇ ಇರಲಿಲ್ಲ. ಆದರೆ ಅವನಿಗೆ ಬೈನಾಮಿಯಲ್ ಪ್ರಮೇಯದ ವಿಷಯ ಬಹಳ ತಿಳಿದಿತ್ತು. ಎತ್ತುಗಳ ಮುಂದೆ ಗಾಡಿಯನ್ನು ನಿಲ್ಲಿಸಿದಂತೆ, ತನ್ನ ಶಿಷ್ಯನಿಗೆ ಫೇಬರ್ ಎಲ್ಲಕ್ಕಿಂತ ಮೊದಲು ಅದನ್ನೇ ಕಲಿಸಲಾರಂಭಿಸಿದ. ಬೀಜಗಣಿತದ ಪಾಠಗಳು ಹೀಗೆಯೇ ಸಾಗಿದುವು. ಫೇಬರನ ಪಾಂಡಿತ್ಯವನ್ನೂ ಜ್ಞಾನದಲ್ಲಿ ಅವನಿಗಿರುವ ಆಸಕ್ತಿಯನ್ನೂ ಕಂಡ ಆ ವಿದ್ಯಾರ್ಥಿ ದಿನದಿನಕ್ಕೂ ಅವನಲ್ಲಿ ಹೆಚ್ಚು ಹೆಚ್ಚು ಗೌರವ ಬೆಳೆಸಿಕೊಂಡ. ಫೇಬರ್ ಅವನಿಗೆ ಸಾಕಷ್ಟು ಬೀಜಗಣಿತ ಕಲಿಸಿ ಆ ಮೂಲಕ ತಾನೂ ಕಲಿತು, ಕ್ಷಮೆ ಬೇಡುತ್ತಾ ಪುಸ್ತಕವನ್ನು ವಿಜ್ಞಾನದ ಮಾಸ್ತರಿಗೆ ಹಿಂದಿರುಗಿಸಿದ.

ಮುಂದೆ ಕಟ್ಟಿದ ಪರೀಕ್ಷೆಗಳನ್ನೆಲ್ಲ ಒಂದೊಂದಾಗಿ ಪಾಸುಮಾಡಿ, ಫೇಬರ್ ವಿಶ್ವವಿದ್ಯಾನಿಲಯದಲ್ಲಿ ಭೌತ ಮತ್ತು ರಸಾಯನಶಾಸ್ತ್ರಗಳಲ್ಲಿ ಪ್ರಾಧ್ಯಾಪಕನಾದ. ಇನ್ನು ಮುಂದೆ ಫೇಬರ್ ಬೇಕು ಬೇಕಾದುದನ್ನೆಲ್ಲ ಕಲಿಸುವ ಹುಡುಗ ಉಪಾಧ್ಯಾಯನಲ್ಲ. ವಾರದಲ್ಲಿ ಕೆಲವು ನಿರ್ದಿಷ್ಟ ಗಂಟೆಗಳ ಕಾಲ ಮಾತ್ರ ಉಪನ್ಯಾಸ ಮಾಡುವುದೆಷ್ಟೋ ಅಷ್ಟೆ ಅವನ

ಕೆಲಸ. ಅಂದ ಮೇಲೆ ಅವನಿಗೆ ಬೇಕಾದಷ್ಟು ಬಿಡುವು ಸಿಕ್ಕಿದ ಹಾಗಾಯಿತು. ಫೇಬರನಿಗೆ, ಬಿಡುವು ಸಿಗುವುದು ಭಂಗಾರದ ಗಣಿ ಸಿಕ್ಕ ಹಾಗೆ. ಬಿಡುವಿನ ವೇಳೆಯಲ್ಲಿ ಅವನು ಪ್ರೌಢಗಣಿತದ ವ್ಯಾಸಂಗಕ್ಕೆ ಮನಸ್ಸು ಮಾಡಿದ.

"ಅಯ್ಯೋ ಅನ್ಯಾಯ" ಕೂಗಿಕೊಂಡ ಬಾಲು.

"ತಾಳಿ, ತಾಳಿ, ಕೊರಗಬೇಡಿ....ಅಷ್ಟಕ್ಕೇ ಅವನ ಮನಸ್ಸಿನಲ್ಲಿದ್ದ ಆಸೆಯೇನೂ ಸುಮ್ಮನೆ ಕೂಡಲಿಲ್ಲ. ಪ್ರಕೃತಿ ಶಾಸ್ತ್ರದ ಮೇಲಿನ ಅವನ ಆಸಕ್ತಿ ಭೂತದಂತೆ ಅವನನ್ನು ಕಾಡಲಾರಂಭಿಸಿತು. ಆದ್ದರಿಂದ ಫೇಬರ್ ತನ್ನ ಬಿಡುವಿನ ಕಾಲವನ್ನು ಎರಡು ವಿಷಯಗಳಿಗೂ ಅರ್ಧರ್ಧ ಹಂಚಿಕೊಂಡ. ಕೆಲವು ಕಾಲವೇನೋ ಇದು ನಡೆಯಿತು. ಪ್ರೌಢಗಣಿತ ಶಾಸ್ತ್ರ ಚೆನ್ನಾಗಿಯೇ ಮುಂದುವರಿಯುತ್ತಿತ್ತು. ಆದರೆ ಪ್ರಕೃತಿಶಾಸ್ತ್ರ ಅದಕ್ಕಿಂತ ಭೇಷಾಗಿ ಬೆಳೆಯಿತು.

ಕೊನೆಗೊಂದು ದಿನ ಫೇಬರ್ ಪ್ರೌಢಗಣಿತವನ್ನು ಕೈ ಬಿಡಲೇಬೇಕಾಯಿತು. ಆಗ ಅವನು ಕಾರ್ಸಿಕದಲ್ಲಿ, ಪ್ರಾಧ್ಯಾಪಕನಾಗಿದ್ದ. ಆ ಊರಿನಲ್ಲಿ ಯಾರೂ ಕಂಡು ಕೇಳಿ ಅರಿಯದ ಹೂಗಳು ರಾಶಿರಾಶಿಯಾಗಿ ಬೆಳೆಯುತ್ತಿದ್ದುವು. ಅವುಗಳ ಬಗ್ಗೆ ವ್ಯಾಸಂಗ ಮಾಡಲು ಮಾರ್ಕ್ವಿಸ್, ತಾಂಡನ್ ಎಂಬ ಸಸ್ಯ ಮತ್ತು ಪ್ರಾಣಿ ಶಾಸ್ತ್ರಗಳ ಪ್ರಾಧ್ಯಾಪಕರು ಬಂದರು. ಇಬ್ಬರಿಗೂ ಪರಿಚಯವಾದ ಮೇಲೆ ಅವರು ಒಟ್ಟೊಟ್ಟಿಗೆ ದ್ವೀಪವನ್ನೆಲ್ಲಾ ಸುತ್ತಿ ವಿವಿಧ ಹೂವುಗಳನ್ನು ಅಭ್ಯಾಸ ಮಾಡಿದರು. ಕೊನೆಗೊಂದು ದಿನ ಆ ಪ್ರಾಧ್ಯಾಪಕರಲ್ಲೊಬ್ಬ, " ನೀವು ಗಣಿತ ಶಾಸ್ತ್ರವನ್ನು ಅದರ ಪಾಡಿಗೆ ಬಿಟ್ಟು ಪ್ರಕೃತಿಶಾಸ್ತ್ರಕ್ಕೆ ಬನ್ನಿ. ನಿಮ್ಮಲ್ಲಿ ನಿಜವಾಗಿ ಶಕ್ತಿಯಿದ್ದರೆ, ಜನ ನಿಮಗೆ ಕಿವಿಗೊಡುತ್ತಾರೆ. ನಿಮ್ಮ ಗಣಿತವನ್ನು ಯಾರು ಕೇಳುತ್ತಾರೆ?" ಎಂದ. ಜೀವಿಗಳನ್ನು ಹೇಗೆ ಅಭ್ಯಸಿಸಬೇಕು ಎಂದು ವಿವರಿಸುತ್ತಾ ಆತ ಚಾಕು ಕತ್ತರಿಗಳನ್ನು ತಂದು ಪ್ರಯೋಗಿಸಿ ತೋರಿಸಿಕೊಟ್ಟ. ಆದರೆ ಫೇಬರ್ ಅಷ್ಟಕ್ಕೇ ನಿಲ್ಲದೆ ಅವುಗಳನ್ನು ವಿಶ್ವಾಸದಿಂದ ನೋಡಿ ಅವುಗಳ ಸ್ವಭಾವವನ್ನೂ ಅರಿತ. ಬೆರಳು ತೋರಿಸಿದರೆ ಹಸ್ತ ನುಂಗುತ್ತಾರೆ ಎನ್ನುತ್ತಾರಲ್ಲ ಹಾಗೆ. ಈ ಘಟನೆ ಫೇಬರನನ್ನೂ ಸಂದಿಗ್ಧ ಪರಿಸ್ಥಿತಿಯಲ್ಲಿ

ಕೆಡವಿತು. ಹತ್ತಿರದ ಬೆಟ್ಟವೊಂದನ್ನೇರಿ ಅವನು ದಿನವೆಲ್ಲ ಯೋಚಿಸಿದ. ಏಕೆಂದರೆ ಆಗಿನ ಕಾಲದಲ್ಲಿ ಪ್ರಕೃತಿ ಶಾಸ್ತ್ರಜ್ಞರನ್ನು ಹುಳು ಹುಪ್ಪಟೆಗಳ ಪ್ರಾಧ್ಯಾಪಕರು ಎಂದು ಹಾಸ್ಯ ಮಾಡುತ್ತಿದ್ದರು. ಅವರನ್ನು ಹುಚ್ಚರು ಎಂದೇ ಭಾವಿಸಿದ್ದರು. ಏನೇ ಆದರೂ ಯಾರ ಅಭಿಪ್ರಾಯವೂ ಫೇಬರ ನನ್ನು ಪ್ರಕೃತಿ ಶಾಸ್ತ್ರದಿಂದ ದೂರವಿಡಲಿಲ್ಲ. ಅವನು ಯಾವ ಕೆಲಸವನ್ನೇ ಮಾಡುತ್ತಿರಲಿ ಸಣ್ಣ ಜೀವಿಯೊಂದು ಕಣ್ಣಿಗೆ ಬಿದ್ದರೆ ಸಾಕು. ಕೆಲಸವನ್ನು ಅಲ್ಲಿಗೆ ಬಿಟ್ಟು ಆ ಜೀವಿಯನ್ನು ಹಿಂಬಾಲಿಸುತ್ತಿದ್ದ. ಇದೊಂದು ವಿಷಯ ದಲ್ಲಿ ಅವನು ಹುಚ್ಚನೇ ಸರಿ.

ಆದರೆ ಫೇಬರ್ ಬಹಳ ದಿನ ಕಾರ್ಸಿಕದಲ್ಲಿ ನಿಲ್ಲಲಿಲ್ಲ. ಅವನಿಗೆ ಅಪ ರಿಚಿತವಾದೊಂದು ಪುಟ್ಟ ಜೀವಿ ಅವನನ್ನು ಅಲ್ಲಿಂದ ಕಳಿಸಿ ಬಿಟ್ಟಿತು. ಅದು ಮಲೇರಿಯ ಸೊಳ್ಳೆ. ಮುಂದೆ, 'ರೊನಾಲ್ಡ್ ರಾಸ್' ಎಂಬ ಒಬ್ಬ ಆಂಗ್ಲ ವಿಜ್ಞಾನಿ ಅದರ ದುರ್ಗುಣಗಳ ಪರಿಚಯವನ್ನೂ, ಅದರಿಂದ ಹರ ಡುವ ಮಲೇರಿಯ ರೋಗವನ್ನೂ, ಕಂಡು ಹಿಡಿದು ಸಾವಿರಾರು ಜನರನ್ನು ಮಲೇರಿಯದಿಂದ ಕಾಪಾಡಿದ.

ಫೇಬರನಿಗೂ ಮಲೇರಿಯರೋಗ ಅಂಟಿತು. ಆಗ ಅದರಿಂದ ತಪ್ಪಿಸಿ ಕೊಳ್ಳಲು ಅವನಿಗಿದ್ದುದು ಮೂರೇದಾರಿ. ಊರು ಬಿಡಬೇಕು ಅಥವಾ ಅದೃಷ್ಟವಶಾತ್ ವಾಸಿಯಾಗಬೇಕು ಇಲ್ಲವೇ ಸಾಯಬೇಕು. ನಮ್ಮ ಅದೃ ಷ್ಟಕ್ಕೆ ಫೇಬರ್ ಆ ಊರನ್ನೇ ಬಿಟ್ಟು ಅವಿನಾನ್‌ಗೆ ಹಿಂದಿರುಗಿದ. ಅಲ್ಲಿ ತಾನು ವಿದ್ಯಾರ್ಥಿಯಾಗಿದ್ದ ಕಾಲೇಜಿನಲ್ಲೇ ಅಧ್ಯಾಪಕನಾದ."

# ಗೆಲುವಿನ ದಾರಿಯಲ್ಲಿ

ಊರಿನ ಜನರ ಉಪಯೋಗಕ್ಕಾಗಿ ಫೇಬರ್ ಆಗಾಗ್ಗೆ ವಿಜ್ಞಾನದ ಮೇಲೆ ಉಪನ್ಯಾಸ ಮಾಡುತ್ತಿದ್ದ. ಅವು ಎಷ್ಟು ಜನಪ್ರಿಯವಾಗಿದ್ದು ವೆಂದರೆ ಅಲ್ಲಿಗೆ ಮಿತಿಮೀರಿ ನುಗ್ಗುವ ಜನರನ್ನು ತಡೆಯಲು ಪೋಲೀಸರ ಸಹಾಯ ಬೇಕಾಗುತ್ತಿತ್ತು. ಭಾಷಣಕ್ಕೆ ಅವನು ಆರಿಸಿಕೊಳ್ಳುತ್ತಿದ್ದ ವಿಷಯಗಳು ಜನರ ಕುತೂಹಲವನ್ನು ಹೆಚ್ಚಿಸುತ್ತಿದ್ದುವು. ಸಾಲದ್ದಕ್ಕೆ ಅವನ ಮಾತಿನ ಧಾಟಿ ಅವರನ್ನು ಕಟ್ಟಿಹಾಕುತ್ತಿತ್ತು. ಸರಳವಾದ ಖಚಿತ ವಾದ ಅವನ ಮಾತು, ಅವನ ಅಗಾಧವಾದ ಪಾಂಡಿತ್ಯವನ್ನು ಸೂಚಿಸು ತ್ತಿತ್ತು. ಈ ವೇಳೆಗಾಗಲೇ ಫೇಬರನ ಹೆಸರು ಇತರ ವಿಜ್ಞಾನಿಗಳ ಕಿವಿ ಗಳಿಗೂ ಬಿದ್ದಿತ್ತು.

ಒಂದು ಸಲ ಲೂಯಿ ಪಾಶ್ಚರ್ ಫೇಬರನನ್ನು ನೋಡಲು ಬಂದ. ನೀವು ಲೂಯಿ ಪಾಶ್ಚರನ ಹೆಸರು ಕೇಳಿದ್ದೀರಲ್ಲ?

"ಹೌದು ಹೌದು....ಹುಚ್ಚುನಾಯಿಯ ಕಡಿತಕ್ಕೆ ಅವನು ಔಷಧ ಕಂಡುಹಿಡಿದಿದ್ದಾನೆ...."

"ಹೌದು. ಆತ ಒಂದು ದಿನ ಆಕಸ್ಮಿಕವಾಗಿ ಫೇಬರನ ಮನೆಯ ಬಾಗಿಲನ್ನು ತಟ್ಟಿದ. ಆ ವರ್ಷ ರೇಷ್ಮೆಯ ಗೂಡುಗಳಿಗೆಲ್ಲ ರೋಗ ತಗುಲಿ ಬಹಳ ನಷ್ಟವಾಗುವ ಸಂಭವವಿದ್ದುದರಿಂದ ಸರ್ಕಾರದವರು ಅದರ ನಿವಾ ರಣೋಪಾಯವನ್ನು ಕಂಡುಹಿಡಿಯಲು ಲೂಯಿ ಪಾಶ್ಚರನನ್ನು ಕೇಳಿ ಕೊಂಡಿದ್ದರು. ಆದರೆ ಪಾಶ್ಚರ್ ರೇಷ್ಮೆಗೂಡನ್ನು ನೋಡಿರಲಿಲ್ಲ. ಅದನ್ನು ಪರಿಚಯ ಮಾಡಿಕೊಡಲು ಫೇಬರನೇ ತಕ್ಕವನು ಎಂದು ಭಾವಿಸಿ ಅವನು ಅಲ್ಲಿಗೆ ಬಂದಿದ್ದ."

"ನನಗೊಂದು ರೇಷ್ಮೆಯ ಗೂಡು ಬೇಕಲ್ಲ?"

"ಧಾರಾಳವಾಗಿ....ಒಂದು ನಿಮಿಷ ನಿಲ್ಲಿ. ನಮ್ಮ ನೆರೆಮನೆಯವರು ಅದರ ವ್ಯಾಪಾರ ಮಾಡುತ್ತಾರೆ. ಅಲ್ಲಿಂದ ತರುತ್ತೇನೆ...." ಎನ್ನುತ್ತಾ ಹೋಗಿ ಫೇಬರ್ ತನ್ನ ಜೇಬುಗಳ ತುಂಬ ರೇಶಿಮೆಯ ಗೂಡುಗಳನ್ನು

ತುಂಬಿಕೊಂಡು ತಂದ. ಅವುಗಳಲ್ಲೊಂದನ್ನು ಪಾಶ್ಚರನ ಕೈಗಿತ್ತಾಗ ಅವನು ಅದನ್ನು ಹಿಡಿದು ತಿರುಗಿಸಿ ತಿರುಗಿಸಿ ನೋಡಿದ. ತಾನು ಅದು ವರೆಗೆ ಕಾಣದ, ಪ್ರಪಂಚದ ಯಾವುದೋ ಮೂಲೆಯಿಂದ ತಂದ ವಸ್ತುವೋ ಎಂಬಂತೆ ಅದನ್ನು ಕುತೂಹಲದಿಂದ ಗಮನಿಸಿದ. ಕೊನೆಗೆ ಅದನ್ನು ಕಿವಿಯ ಬಳಿ ಹಿಡಿದು ಕುಲುಕಿದ.

"ಒಳಗೇನೋ ಅಲ್ಲಾಡುತ್ತದಲ್ಲ?" ಎಂದು ಆಶ್ಚರ್ಯದಿಂದ ಕೇಳಿದ.

"ಅಲ್ಲವೆ ಮತ್ತೆ?"

"ಏನಿದೆ ಒಳಗೆ?"

"ಪೊರೆ ಹುಳು."

"ಪೊರೆ ಹುಳು? ಹಾಗೆಂದರೆ?"

"ಅಂದರೆ ಕಂಬಳಿ ಹುಳು, ಚಿಟ್ಟೆಯಾಗುವುದಕ್ಕೆ ಮೊದಲು ಧರಿಸುವ ರೂಪವನ್ನು ಹಾಗೆಂದು ಕರೆಯುತ್ತಾರೆ."

"ಅಂದಮೇಲೆ ಎಲ್ಲ ರೇಶಿಮೆ ಗೂಡಿನಲ್ಲೂ ಇಂಥದೊಂದು ಇರಲೇ ಬೇಕು?"

"ಅಲ್ಲವೆ ಮತ್ತೆ? ತನ್ನ ಮುಂದಿನ ಮೆದು ದೇಹವನ್ನು ರಕ್ಷಿಸಿಕೊಳ್ಳು ವುದಕ್ಕಾಗಿಯೇ ಕಂಬಳಿ ಹುಳು ರೇಶಿಮೆಯನ್ನು ತನ್ನ ಸುತ್ತನೂತು ಕೊಳ್ಳುವುದು."

"ಓಹ್!" ಬೆರಗಾದ ಪಾಶ್ಚರ್.

ಆಮೇಲೆ ಆ ಗೂಡುಗಳನ್ನೆಲ್ಲ ತೆಗೆದುಕೊಂಡು ಪಾಶ್ಚರ್ ಹೊರಟು ಹೋದ. ನಂತರ ಕೆಲವು ದಿನಗಳಲ್ಲೇ ರೇಷ್ಮೆಹುಳುಗಳನ್ನೂ ಫ್ರಾನ್ಸಿನ ರೇಷ್ಮೆ ಕೈಗಾರಿಕೆಯನ್ನೂ, ರೋಗದಿಂದಲೂ, ನಷ್ಟದಿಂದಲೂ ಉಳಿಸಿದ.

ಪಾಶ್ಚರನ ನಡವಳಿಕೆ ಫೇಬರನಿಗೆ ಪಾಠ ಕಲಿಸಿತು. ಯಾವ ವಿಷಯ ವನ್ನು ವ್ಯಾಸಂಗಕ್ಕೆ ತೆಗೆದುಕೊಂಡರೂ, ಏನೂ ಅರಿಯದವರಂತೆ ಮೂಲ ವನ್ನೇ ಕೆದಕುವುದು ಉತ್ತಮವಾದ ಮಾರ್ಗ ಎನ್ನಿಸಿತು. ಏನೂ ಅರಿಯ ದವನಂತೆ ಪ್ರತಿಯೊಂದು ವಿಷಯವನ್ನೂ ಪ್ರಶ್ನಿಸಿ ಫೇಬರ್ ತನ್ನ ಪುಟ್ಟ ಜೀವಿಗಳ ವಿಷಯವನ್ನು ಹೆಚ್ಚುಹೆಚ್ಚಾಗಿ ತಿಳಿದ.

ಜಾನ್ ಸ್ಟೂವರ್ಟ್ ಮಿಲ್ ಎಂಬ ಒಬ್ಬ ಪ್ರಸಿದ್ಧ ಅರ್ಥಶಾಸ್ತ್ರಜ್ಞ

ಹವಾ ಬದಲಿಸಲು ತನ್ನ ಪತ್ನಿಯೊಡನೆ ಅವಿನಾನ್‌ಗೆ ಬಂದಿದ್ದ. ಅವನ ಪತ್ನಿ ಅಲ್ಲೇ ಸತ್ತುಹೋದಳು. ಅವಳ ನೆನಪಿಗಾಗಿ, ಮಿಲ್ ಅಲ್ಲೇ ಸ್ವಲ್ಪ ಭೂಮಿಯನ್ನು ಕೊಂಡು ಅವಳ ಸಮಾಧಿ ತನ್ನ ಕಿಟಕಿಗೆ ಕಾಣುವಂತೆ ಒಂದು ಮನೆಯನ್ನು ಕಟ್ಟಿಸಿಕೊಂಡು, ಆಗಾಗ್ಗೆ ಅಲ್ಲಿ ಬಂದು ಇರುತ್ತಿದ್ದ. ಕೊನೆಗೆ ಅವನ ಜೀವನ ಕೊನೆಗಂಡುದೂ ಆ ಊರಿನಲ್ಲಿಯೇ.

ನೀವು ಮುಂದೆ ಅವನ ಅಪಾರವಾದ ಪಾಂಡಿತ್ಯದ ಬಗ್ಗೆ ಕೇಳುತ್ತೀರಿ. ಅವನು ಎಂಟುವರ್ಷದ ಹುಡುಗನಾಗಿದ್ದಾಗಲೇ ಬಹು ಸೊಗಸಾಗಿ ಗ್ರೀಕ್ ಭಾಷೆಯನ್ನು ಕಲಿತಿದ್ದ. ಆ ಭಾಷೆಯಲ್ಲಿ ತತ್ವ, ಇತಿಹಾಸ ಗ್ರಂಥಗಳನ್ನೆಲ್ಲಾ ಓದಿ ಪೂರೈಸಿದ್ದ.

ಫೇಬರ್ ಮತ್ತು ಮಿಲ್ ಇಬ್ಬರೂ ಬಹಳ ಸ್ನೇಹಿತರು. ಮಿಲ್ ಆಗಾಗ್ಗೆ ಫೇಬರನ ಮನೆಗೆ ಬರುತ್ತಿದ್ದ. ಜ್ಞಾನ, ವಿದ್ಯಾಭ್ಯಾಸ ತಿಳುವಳಿಕೆ ಇವುಗಳ ಬಗ್ಗೆ ಅವರಿಬ್ಬರೂ ಗಂಟೆಗಟ್ಟಲೆ ಚರ್ಚಿಸುತ್ತಿದ್ದರು. ಸ್ತ್ರೀವಿದ್ಯಾಭ್ಯಾಸದಲ್ಲಿ ಇಬ್ಬರಿಗೂ ಬಹಳ ನಂಬಿಕೆಯಿತ್ತು.

ಈ ವೇಳೆಗಾಗಲೇ ಫೇಬರ್ ತನ್ನ ಸಂಶೋಧನೆಗಳಿಂದ, ಲೇಖನಗಳಿಂದ ಪ್ರಸಿದ್ಧನಾಗಿದ್ದ ಎಂದೆನಲ್ಲ, ಅವನ ಪುಟ್ಟ ಜೀವಿಗಳ ಕಥೆಗಳನ್ನು ಬಹಳ ಜನ ಮೆಚ್ಚಿದ್ದರು. ಆದರೆ ಈ ಪ್ರಕೃತಿಶಾಸ್ತ್ರಜ್ಞನಿಗೆ ಹಣದ ಕೊರತೆ ಇದ್ದೇ ಇತ್ತು. ಮ್ಯಾಡರ್ ಎಂಬ ಸಸ್ಯದ ಬೇರಿನಲ್ಲಿರುವ ಕೆಂಪು ಬಣ್ಣವನ್ನು ಸುಲಭವಾದ ರೀತಿಯಲ್ಲಿ ಉಪಯೋಗಿಸಲು ಕಂಡು ಹಿಡಿದರೆ ಲಾಭ ಸಿಗುವ ಸಂಭವವಿತ್ತು. ಏಕೆಂದರೆ ಆಗಿನ ಕಾಲದಲ್ಲಿ ಅದು ಫ್ರಾನ್ಸಿನ ಬಹುಮುಖ್ಯ ಕೈಗಾರಿಕೆಗಳಲ್ಲಿ ಒಂದು. ಅವುಗಳಲ್ಲಿ ಪ್ರಯೋಗ ನಡೆಸಿ ಫೇಬರ್ ಉತ್ತಮವಾದ ಕೃತಕ ಬಣ್ಣವನ್ನು ಕಂಡು ಹಿಡಿದ. ಅದನ್ನು ಪ್ರಕಟಿಸಿದ್ದರೆ ಫೇಬರನಿಗೇನೋ ಬಹಳ ಹಣ ಸಿಗುತ್ತಿತ್ತು. ಆದರೆ ಅದು ಸಹಜವರ್ಣದ ಕೈಗಾರಿಕೆಯನ್ನು ನಾಶಮಾಡಿ, ನೂರಾರು ಜನ ಕೆಲಸಗಾರರ ಜೀವನವನ್ನು ಹಾಳುಮಾಡುತ್ತಿತ್ತು. ಆದ್ದರಿಂದ ಫೇಬರ್ ತನ್ನ ಸಂಶೋಧನೆಯನ್ನು ಪ್ರಕಟಿಸದೆ ಸಹಜವರ್ಣವನ್ನು ಉತ್ತಮಗೊಳಿಸಲು ಪ್ರಯತ್ನಿಸುತ್ತಿದ್ದ. ಇನ್ನೇನು ಅವನಿಗೆ ಜಯ ಸಿಗಬೇಕು ಎಂಬ ವೇಳೆಗೆ ಜರ್ಮನಿಯವರು ಅದನ್ನು ಕಂಡುಹಿಡಿದುಬಿಟ್ಟರು. ಫೇಬರನ ಅಷ್ಟು

ಶ್ರಮವೂ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತಾಯಿತು. ಆದರೆ ಈ ಸಂಶೋಧನೆ ಅವನಿಗೆ ಅಮೋಘವಾದ ಸ್ನೇಹವನ್ನು ಆ ಮೂಲಕ ಹಿರಿದೊಂದು ಭಾಗ್ಯವನ್ನೂ ತಂದುಕೊಟ್ಟಿತು. ಆ ಸ್ನೇಹ ಯಾರದು ಗೊತ್ತೇ? 'ವಿಕ್ಟರ್ ಡುರಾಯ್' ಎಂಬ ಗುಣಗ್ರಾಹಿಯಾದ ಒಬ್ಬ ವ್ಯಕ್ತಿಯದು. ಆಗ ಅವನು ಫ್ರಾನ್ಸಿನ ವಿದ್ಯಾಮಂತ್ರಿಯಾಗಿದ್ದ.

ಒಂದು ದಿನ ಫೇಬರ್ ಬಣ್ಣಗಳ ಪಾತ್ರೆಯಲ್ಲಿ ಏನನ್ನೋ ಹಾಕಿ ಕಲಸುತ್ತಿದ್ದ ಸಮಯದಲ್ಲಿ ಹಿಂದೆ ಪರಿಚಿತವಾಗಿದ್ದ ನಗುಮುಖವೊಂದು ಅವನ ಬಾಗಿಲಲ್ಲಿ ಇಣುಕಿತು. ಫೇಬರನಿಗೆ ವಿವೇಕಿಯೂ ಸ್ನೇಹಪರನೂ ಆದ ಆ ವ್ಯಕ್ತಿಯ ಪರಿಚಯವಿತ್ತು. ಹಿಂದೆ ಅವನು ಶಾಲೆಯ ಇನ್ಸ್‌ಪೆಕ್ಟರನಾಗಿದ್ದ. ಅವನೀಗ ಫ್ರಾನ್ಸಿನ ಮೂರನೇ ನೆಪೋಲಿಯನ್ ಚಕ್ರವರ್ತಿಯ ವಿದ್ಯಾಮಂತ್ರಿ.

"ನನಗೆ ಕೆಲವೇ ನಿಮಿಷಗಳ ಪುರುಸೊತ್ತಿದೆ. ಅದನ್ನು ನಿಮ್ಮೊಡನೆ ಕಳೆಯಲು ಬಂದಿದ್ದೇನೆ."

ಆಕಸ್ಮಿಕವಾಗಿ ಸಿಕ್ಕಿದ ಆ ಗೌರವ ಫೇಬರನನ್ನು ಗಡಿಬಿಡಿಯಲ್ಲಿ ಕೆಡವಿತ್ತು. "ನನ್ನ ವೇಷ ಸರಿಯಾಗಿಲ್ಲ....ಕೈಯೆಲ್ಲ ಬೆಂದ ಮಾನಿನಂತಾಗಿದೆ...." ಎಂದೆಲ್ಲ ತಪ್ಪಿಸಿಕೊಳ್ಳಲು ನೆಪ ಹುಡುಕಿದ. ಆದರೆ....

"ನಾನು ಕುಂಟು ನೆಪಗಳನ್ನೆಲ್ಲ ಕೇಳುವವನಲ್ಲ. ನೀವು ಕೆಲಸ ಮಾಡುವುದನ್ನು ನೋಡುವುದಕ್ಕೇ ಬಂದಿದ್ದೇನೆ. ಈ ಸಮಯಕ್ಕೆ ಒಪ್ಪುವುದು ಇಂಥಹ ವೇಷವೇ....ಏನು ಮಾಡುತ್ತಿದ್ದೀರಿ?"

ಫೇಬರ್ ಎಲ್ಲವನ್ನೂ ವಿವರಿಸಿದ ಮೇಲೆ "ನಿಮ್ಮ ಪ್ರಯೋಗಶಾಲೆಗೆ ಏನಾದರೂ ಸಾಮಾನು ಬೇಕಾಗಿದೆಯೇ?" ಎಂದು ಕೇಳಿದ ಮಂತ್ರಿ. ಫೇಬರ್ 'ಏನೂ ಬೇಡ' ಎಂದಾಗ, ಆತ ಆಶ್ಚರ್ಯಪಟ್ಟು "ಎಲ್ಲರ ಹಾಗಲ್ಲ ನೀವು" ಎಂದ. ಆಗ ಫೇಬರ್, "ನನಗೆ ಬೇಕಾದದ್ದು ಒಂದಿದೆ....ಅದು ನಿಮ್ಮ ಕೈ ಕುಲುಕುವ ಭಾಗ್ಯ." ಎಂದು ಉತ್ತರವಿತ್ತ.

"ಆಮೇಲೆ?" ಎಂದು ಆ ಮಂತ್ರಿ ಪುನಃ ಕೇಳಿದಾಗ, ಫೇಬರ್ ಸ್ವಲ್ಪ ನಗುತ್ತ "ನಿಮ್ಮ ಮೃಗಾಲಯದಲ್ಲಿ ಯಾವುದಾದರೂ ಮೊಸಳೆ ಸತ್ತರೆ ಅದರ ಚರ್ಮ ನನಗೆ ಬೇಕು. ನನ್ನ ಪ್ರಯೋಗಶಾಲೆಯ ಭಾವ

ಣಿಗೆ ಅದನ್ನು ತೂಗುಹಾಕಿಬಿಟ್ಟರೆ ಆಗ....ಅಲಂಕಾರ ಪೂರ್ತಿಯಾಗಿ.... ಇದು ಮಾಟಗಾರನ ಮನೆಯ ಹಾಗೆ ಕಾಣಿಸುತ್ತದೆ....ಅಷ್ಟೆ. ಅದೊಂದು ಬಾಕಿ...." ಎಂದ.

ಮಂತ್ರಿ ತಲೆಯೆತ್ತಿ ಪ್ರಯೋಗಶಾಲೆಯ ಛಾವಣಿಯನ್ನೂ, ಸುತ್ತ ಮುತ್ತ ಕವಿದಿದ್ದ ವಿವಿಧ ಬಣ್ಣಗಳ ಮಿಶ್ರಭಯಂಕರ ರೂಪವನ್ನೂ ಕಂಡು ಫೇಬರನ ಕಡೆಗೆ ತಿರುಗಿ ಘಟ್ಟಿಯಾಗಿ ನಕ್ಕ. "ರಸಾಯನ ಶಾಸ್ತ್ರಜ್ಞನ ಮನಸ್ಸು ಈಗ ಅರ್ಥವಾಯಿತು. ನೀವು ಪ್ರಕೃತಿ ಶಾಸ್ತ್ರಜ್ಞರು ಎನ್ನುವುದು ಗೊತ್ತು. ನಿಮ್ಮ ಲೇಖನಿಯ ಸಾಮರ್ಥ್ಯವನ್ನೂ ಬಲ್ಲೆ. ನಿಮ್ಮ ಮುದ್ದಿನ ಕೀಟಗಳ ಬಗ್ಗೆ ಕೇಳಿದ್ದೇನೆ. ಅವುಗಳನ್ನು ನೋಡಬೇಕಾಗಿತ್ತು. ಆದರೆ ಇನ್ನು ಕೆಲವೇ ನಿಮಿಷಗಳಲ್ಲಿ ನಾನು ರೈಲು ಹತ್ತಬೇಕು. ಹಾಗೇ ಬನ್ನಿ, ಸ್ಟೇಷನ್ನಿನವರೆಗೂ ಮಾತನಾಡುತ್ತಾ ಹೋಗೋಣ. ದಾರಿಯಲ್ಲಿ ಯಾರೂ ನಮ್ಮನ್ನು ತೊಂದರೆ ಮಾಡುವವರಿಲ್ಲ" ಎಂದ.

ಇಬ್ಬರೂ ಮ್ಯಾಡರ್ ಸಸ್ಯದ ಬಣ್ಣ, ಅದರ ಕೈಗಾರಿಕೆ, ಕೀಟಗಳು ಮುಂತಾದವುಗಳ ವಿಷಯ ಮಾತನಾಡುತ್ತಾ, ಮೈಮರೆತು ದಾರಿ ನಡೆದರು. ಮೃದು ಮನಸ್ಸಿನ ಈ ಮಂತ್ರಿಯನ್ನು ಕಂಡು ಫೇಬರನ ಮನಸ್ಸು ಮುಗ್ಧ ವಾಗಿತ್ತು. ಆದರೆ ಅವರು ರೈಲ್ವೆ ನಿಲ್ದಾಣ ತಲಪಿದಾಗ ಫೇಬರನಿಗೆ ಕೈಕಾಲೇ ಉಡುಗುವಂತಾಯಿತು. ಮಂತ್ರಿಯನ್ನು ಗೌರವಿಸುವುದಕ್ಕೆ ಅಲ್ಲಿ ಸೇನಾಪತಿ, ಅವನ ಕಾರ್ಯದರ್ಶಿ, ಪುರಸಭೆಯ ಅಧ್ಯಕ್ಷ, ಅವನ ಸಹೋ ದ್ಯೋಗಿಗಳು, ಶಾಲೆಯ ಇನ್ಸ್‌ಪೆಕ್ಟರ್, ವಿದ್ಯಾ ಇಲಾಖೆಯ ಇತರ ಮುಖ್ಯಸ್ಥರು ಎಲ್ಲರೂ ನೆರೆದಿದ್ದರು. ಅವರೆಲ್ಲ ಮಂತ್ರಿಗೆ ತಲೆಬಾಗಿದಾಗ ಆತನ ಜೊತೆಯಲ್ಲೇ ನಿಂತ ಫೇಬರನಿಗೆ ಹೇಗೇಗೋ ಆಯಿತು.

ಆಗ ಡುರಾಯ್, ಫೇಬರ್ ತನ್ನ ಬೆನ್ನ ಹಿಂದೆ ಮಡಿಸಿಟ್ಟು ಕೊಂಡಿದ್ದ ಕೈಗಳನ್ನೆಳೆದು ಅಲ್ಲಿನ ಮುಖ್ಯಸ್ಥರಿಗೆ ತೋರಿಸಿದಾಗ "ಬಣ್ಣ ಗಾರನ ಕೈಯಿದು." ಎಂದು ಅದನ್ನವರು ಗುರುತಿಸಿದರು.

"ಹೌದು, ಆದರೆ ಇಷ್ಟೇ ಅಲ್ಲ. ಈ ಕೈಗಳು ನಿಮ್ಮ ಜಿಲ್ಲೆಯ ಮುಖ್ಯ ಕೈಗಾರಿಕೆಗೆ ಬೇಕಾದ ಸಹಾಯ ಮಾಡಲಿವೆ. ಈ ಕೈ ಪೆನ್ನು, ಪೆನ್ಸಿಲು ಗಳನ್ನು ಸಮರ್ಥವಾಗಿ ಉಪಯೋಗಿಸಬಲ್ಲವು. ಜೊತೆಗೆ ಬೂದುಗಾಜನ್ನು,

ಶಸ್ತ್ರವೈದ್ಯನ ಚೂರಿಯನ್ನು ಇವು ಉಪಯೋಗಿಸುತ್ತವೆ. ಈ ವಿಷಯ ನಿಮಗೆ ತಿಳಿದಿದ್ದರೂ, ಮತ್ತೊಮ್ಮೆ ಅದನ್ನು ವರ್ಣಿಸುವ ಆಸೆ ನನಗೆ...."

ಫೇಬರನಿಗೆ ಸಂಕೋಚವಾಯಿತು. ಭೂಮಿ ಬಾಯ್ದೆರೆದು ನನ್ನನ್ನು ನುಂಗಬಾರದೆ ಎಂದು ಹಾರೈಸುತ್ತಿದ್ದ. ಅವನ ಪುಣ್ಯಕ್ಕೆ ರೈಲು ಬೇಗ ಹೊರಟಿತು. ಹಸನ್ಮುಖದ ಮಂತ್ರಿಯನ್ನು ಜೊತೆಗೆ ಕರೆದುಕೊಂಡು ಅದು ಓಡಿತು.

ಕೆಲವೇ ದಿನಗಳಲ್ಲಿ ಡುರಾಯ್ ಫೇಬರನಿಗೆ ಕಾಗದ ಬರೆದು, ಅವನನ್ನು ಪ್ಯಾರಿಸ್ಸಿಗೆ ಆಹ್ವಾನಿಸಿದ. ಆದರೆ ಫೇಬರ್ ಅಲ್ಲೆಲ್ಲ ಹೋದರೆ ತನ್ನ ಪ್ರಿಯ ಕೀಟಗಳಿಂದ ದೂರವಾಗಬೇಕಾಗುತ್ತದೆ ಎಂದು ಹೆದರಿ ಹೋಗಲು ಒಪ್ಪಲಿಲ್ಲ. ಆದರೆ ಮಂತ್ರಿ ತನ್ನ ಮುಂದಿನ ಕಾಗದದಲ್ಲಿ 'ಈ ಸಲ ಬರದಿದ್ದರೆ ಪೋಲೀಸರನ್ನು ಕಳಿಸಿ ಹಿಡಿಸಿಕೊಂಡು ಹೋಗುತ್ತೇನೆ' ಎಂದು ಬರೆದಾಗ ಫೇಬರ್ ಹೊರಡಲೇ ಬೇಕಾಯಿತು. ಅವನು ಪ್ಯಾರಿಸ್ಸಿನಲ್ಲಿಳಿದಾಗ ಡುರಾಯ್ ಅವನ ಕೈಗೊಂದು ವೃತ್ತ ಪತ್ರಿಕೆ ಕೊಟ್ಟು "ಪ್ರಯೋಗ ಶಾಲೆಗೆ ಯಂತ್ರ ಸಲಕರಣೆಗಳನ್ನೇನೋ ಬೇಡ ಎಂದಿರಿ....ಇದನ್ನು ಬೇಡ ಎನ್ನುವ ಹಾಗಿದೆಯೇ ನೋಡಿ!"

ಫೇಬರನಿಗೆ ಫ್ರಾನ್ಸಿನ ಚಕ್ರವರ್ತಿಯಿಂದ 'ಲೀಜಿಯನ್ ಆಫ್ ಆನರ್' ದೊರಕುವುದೆಂದು ಆ ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

"ಹಾಗೆಂದರೆ"? ಕೇಳಿದ ಬಾಲು.

"ಅಂದರೆ ಅದು ಫ್ರಾನ್ಸ್ ರಾಜ್ಯ ತನ್ನ ಅತ್ಯುತ್ತಮ ಸೇವಕರಿಗೆ ನೀಡುವ ಪ್ರಶಸ್ತಿ. ನಂತರ ಪ್ರಶಸ್ತಿ ನೀಡುವ ಸಮಯದಲ್ಲಿ ಡುರಾಯ್ ತಾನೇ ಖುದ್ದಾಗಿ ಆ ಕೆಂಪು ರಿಬ್ಬನನ್ನು ಫೇಬರನ ಕೊರಳಿಗೆ ಸುತ್ತಿ ಎರಡು ಕೆನ್ನೆಗಳಿಗೂ ಮುತ್ತಿಟ್ಟು ಈ ಸಂತೋಷದ ಸುದ್ದಿಯನ್ನು ಫೇಬರನ ಮನೆಗೆ ತಂತಿಯ ಮೂಲಕ ಕಳಿಸಿದ. ಆಮೇಲೆ ಅವನ ಪ್ರಯಾಣದ ಖರ್ಚು ಎಂದು ಒಂದು ಲಕೋಟೆಯನ್ನು ಕೈಗಿಟ್ಟ. ಅದರಲ್ಲಿ ಸಾವಿರದ ಇನ್ನೂರು ಫ್ರಾಂಕುಗಳಿದ್ದುವು. ಫೇಬರ್ ಬೇಡ ಎಂದು ಹಿಂದಿರುಗಿಸಲು ಹೋದಾಗ.... ಮಂತ್ರಿ, "ನೀವು ತೆಗೆದುಕೊಳ್ಳದಿದ್ದರೆ ನನ್ನ ಕೋಪವನ್ನು ಎದುರಿಸ ಬೇಕಾಗುತ್ತದೆ. ಅಷ್ಟೇ ಅಲ್ಲ, ನಾಳೆ ಬೆಳಗ್ಗೆ ನೀವು ಚಕ್ರವರ್ತಿಗಳನ್ನು

ಭೇಟಿ ಮಾಡಬೇಕು....ತಪ್ಪಿಸಿಕೊಂಡು ಬಿಡಬೇಡಿ. ಪೋಲೀಸರಿದ್ದಾರೆ...." ಎಂದು ಎಚ್ಚರಿಸಿದ.

ಮಾರನೆಯ ದಿನ ಫೇಬರ್ ಆಸ್ಥಾನದ ವೇಷಭೂಷಣಗಳನ್ನು ತೊಟ್ಟು ಅರಮನೆಯ ಕಡೆಗೆ ಹೊರಟ. ಮೊಳಕಾಲಿನ ಬಳಿ ಬಿಗಿಯಾದ ಥಳ ಥಳಿಸುವ ಷರಾಯಿ. ಆಡಂಬರದ ಗೌನು....ಬೆಳ್ಳಿ ಗುಂಡಿಗಳಿಂದ ಸಿಂಗಾರವಾದ ಬೂಟುಗಳನ್ನು ತೊಟ್ಟುಕೊಂಡು ಕನ್ನಡಿಯಲ್ಲಿ ನೋಡಿಕೊಂಡಾಗ ಅವನಿಗೆ ತನ್ನ ಸೊಗಸುಗಾರ ಜೀರುಂಡೆಯ (ಪೈನ್ ಕಾಕ್ ಚೇಫರ್) ನೆನಪಾಗಿರಬೇಕು ! ಚಕ್ರವರ್ತಿಯೊಡನೆ ಭೇಟಿಯಾದ ಮೇಲೆ ಮಾರನೆಯ ದಿನ ಇತರ ಎಷ್ಟೋ ದೊಡ್ಡ ಮನುಷ್ಯರು ಆಹ್ವಾನಿಸಿದರೂ ಕಿವಿಗೊಡದೆ ಆ ದಿನವೇ ತನ್ನ ಊರಿಗೆ ರೈಲು ಹತ್ತಿ ಫೇಬರ್ ನೆಮ್ಮದಿಯ ಉಸಿರೆಳೆದುಕೊಂಡ.

ಫೇಬರನಿಗೆ ಇದ್ದುದು ಒಂದೇ ಆಸೆ. ಅದು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕನಾಗಿ ವಿದ್ಯಾರ್ಥಿಗಳಿಗೆ ಪ್ರಕೃತಿ ಶಾಸ್ತ್ರವನ್ನು ಮನದಣಿಯ ಕಲಿಸಬೇಕು ಎಂಬುದು. ಆದರೆ ಎಷ್ಟು ಜ್ಞಾನಾರ್ಜನೆ ಮಾಡಿದ್ದರೂ ಹಣವಿಲ್ಲದವರನ್ನು ಯಾರು ಕೇಳುತ್ತಾರೆ? ಪ್ರಾಧ್ಯಾಪಕರ ಪಟ್ಟವನ್ನು ಯಾರು ಕೊಡುತ್ತಾರೆ? ಆದ್ದರಿಂದ ಹಣ ಸಂಪಾದಿಸಬೇಕು ಎಂದು ಮ್ಯಾಡರ್ ಸಸ್ಯದ ಬಣ್ಣದಲ್ಲಿ ಪ್ರಯೋಗ ನಡಸಿದಾಗ ಇನ್ನೇನು ಜಯ ಲಭಿಸಬೇಕು ಅಷ್ಟರಲ್ಲಿ ಆ ಆಸೆಯೂ ಭಗ್ನವಾಯಿತು.

ಇದನ್ನೂ ಮೀರಿಸಿದ ಇನ್ನೊಂದು ಕಷ್ಟ ಅವನಿಗಾಗಿ ಕಾದಿತ್ತು. ಅವನ ಭಾಷಣಗಳು ಬಹಳ ಜನಪ್ರಿಯವಾಗಿದ್ದುವು, ಎಂದು ಕೇಳಿದ್ದೀರಿ. ನಾಟಕಶಾಲೆಗೆ ನುಗ್ಗುವಂತೆ ಜನ ಅವನ ಭಾಷಣದ ಕೊಠಡಿಗೆ ನುಗ್ಗುತ್ತಿದ್ದರು. ಸಹಜವಾಗಿ ಹೆಣ್ಣುಮಕ್ಕಳೂ ಅಲ್ಲಿಗೆ ಧಾವಿಸುತ್ತಿದ್ದರು. ಆದರೆ ನಿಮಗೆ ಆಶ್ಚರ್ಯವಾಗಬಹುದು....ಆಗಿನ ಕಾಲದಲ್ಲಿ ಹೆಣ್ಣುಮಕ್ಕಳು ಭಾಷಣಗಳಿಗೆ ಹೋಗುತ್ತಿರಲಿಲ್ಲ. ಅವರಿಗೆ ಹೆಚ್ಚಿನ ವಿದ್ಯಾಭ್ಯಾಸವನ್ನೂ ಕೊಡುತ್ತಿರಲಿಲ್ಲ. ಆದರೆ ಅದಕ್ಕೆ ಇಪ್ಪತ್ತು ವರ್ಷಗಳ ಹಿಂದೆಯೇ ಇಂಗ್ಲೆಂಡಿನಲ್ಲಿ 'ಫ್ರಾನ್ಸೆಸ್ ಮೇರಿ ಬಸ್' ಎಂಬಾಕೆ ಹುಡುಗಿಯರಿಗಾಗಿ ಮೊಟ್ಟಮೊದಲು ಹೈಸ್ಕೂಲನ್ನು ಪ್ರಾರಂಭಿಸಿದ್ದಳು. ಫ್ರಾನ್ಸಿನಲ್ಲಿಯೂ

ಆ ಚಳುವಳಿ ಆರಂಭವಾಗಿತ್ತು. ಡುರಾಯ್, ಫೇಬರ್, ಮುಂತಾದವರು ಅದಕ್ಕಾಗಿ ಪ್ರಯತ್ನ ನಡೆಸುತ್ತಿದ್ದರು. ಬಾಲಕಿಯರಿಗಾಗಿ ಫೇಬರ್ ಮಾಡುತ್ತಿದ್ದ ಭಾಷಣಗಳು ಬಹುಬೇಗ ಜನಪ್ರಿಯವಾದುವು. ಅಲ್ಲಿ ಅವನು ಗಾಳಿ ನೀರಿನ ವಿಷಯ, ಮಿಂಚು ಸಿಡಿಲುಗಳಿಗಿರುವ ಪರಸ್ಪರ ಸಂಬಂಧ, ಸಾಗರಗಳಾಚೆಗೆ ನಾವು ರೇಡಿಯೋ ಮೂಲಕ ಮಾತನಾಡುವ ರೀತಿ, ಬೆಂಕಿ ಉರಿಯುವುದೇಕೆ? ನಾವು ಉಸಿರಾಡುವುದೇಕೆ? ಬೀಜ ಹೇಗೆ ಮೊಳೆಯುತ್ತದೆ? ಹೂವು ಹೇಗೆ ಅರಳುತ್ತದೆ? ಮುಂತಾದ ವಿಷಯ ಗಳನೆಲ್ಲ ತಿಳಿಸುತ್ತಿದ್ದ. ಆದರೆ ಫೇಬರ್ ಮಾಡುತ್ತಿರುವ ಈ ದುಷ್ಕಾರ್ಯ ಕ್ಕಾಗಿ ಊರಿನ ಮುದುಕಿಯರು ಅವನಿಗೆ ಹಿಡಿಶಾಪ ಹಾಕುತ್ತಿದ್ದರು.

"ಅಯ್ಯೋ, ಎಲ್ಲಿಯ ಗ್ರಹಚಾರ!" ಎಂದಳು ವಸಂತಿ.

ಅಷ್ಟೇ ಅಲ್ಲ, ಹೆಣ್ಣುಮಕ್ಕಳಿಗೆ ವಿದ್ಯೆ ಕಲಿಸುವುದು ದೈವೇಚ್ಛೆಗೆ ವಿರುದ್ಧ....ಅದಕ್ಕಿಂತ ಮಹಾಪಾಪವಿಲ್ಲ ಎಂದು ಆ ಊರಿನವರೆಲ್ಲ ತೀರ್ಮಾ ನಿಸಿದರು. ಫೇಬರನಿಗೆ ಮನೆ ಬಾಡಿಗೆಗೆ ಕೊಟ್ಟಿದ್ದ ಮುದುಕಿ ಮನೆ ಬಿಡಿ ಎಂದು ಹಠ ಹಿಡಿದಳು. ಬೇರೆ ಯಾರೂ ಅವರಿಗೆ ಮನೆ ಬಾಡಿಗೆಗೆ ಕೊಡಲು ಒಪ್ಪಲಿಲ್ಲ. ಫೇಬರನಿಗೆ ಆ ಊರನ್ನೇ ಬಿಡುವ ಮನಸ್ಸಾಯಿತು. ಆದರೆ ಬೇರೆ ಊರಿಗೆ ಹೋಗಲು ಅವನ ಹತ್ತಿರ ಹಣವಿರಲಿಲ್ಲ. ಅಂತಹ ಸಮಯ ದಲ್ಲಿ ಅವನು ತನ್ನ ಗೆಳೆಯ ಮಿಲ್‌ಗೆ ಕಾಗದ ಬರೆದ. ಆಗ ಮಿಲ್ ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ಸದಸ್ಯನಾಗಿದ್ದ. ಮರು ಟಪಾಲಿಗೇ ಅವನು ಫೇಬರ್ ಕೇಳಿದುದಕ್ಕೂ ಹೆಚ್ಚು ಹಣವನ್ನು ಹಿಂದೆ ಮುಂದೆ ನೋಡದೆ ಕಳಿಸಿದ.

ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು ತನ್ನ ಎಪ್ಪತ್ತನೆಯ ವಯಸ್ಸಿ ನಲ್ಲಿ ಬಹು ದೊಡ್ಡ ಸಂಸಾರದೊಡನೆ ಫೇಬರ್ ಆರೆಂಜ್ ಎಂಬ ಪಟ್ಟಣಕ್ಕೆ ಹೊರಟ. ಅಲ್ಲಿಗೆ ಅವನ ಕಥೆ ಮುಗಿಯಿತು ಅಂದುಕೊಂಡಿರಬಹುದು ನೀವು. ಆದರೆ ಅಲ್ಲಿಂದಲೇ ಅವನ ಕಥೆ ನಿಜವಾಗಿ ಆರಂಭಿಸಿದುದು. ಮುಂದೆ ಅವನು ಸಾಧಿಸಿದುದನ್ನು ಪ್ರಪಂಚ ಎಂದಿಗೂ ಮರೆಯುವಂತಿಲ್ಲ. ಅತ್ಯಂತ ಚಟುವಟಿಕೆಯಿಂದ ಉತ್ಸಾಹದಿಂದ ಕೆಲಸಮಾಡಿ, ಲೇಖನಗಳನ್ನು ಬರೆದು, ಅಜರಾಮರವಾದ ಕೀರ್ತಿಯನ್ನು ಗಳಿಸಿದ. ಗೆಳೆಯ ಮಿಲ್‌ನ ಹಣವನ್ನೂ ಫೇಬರ್ ಹಿಂದಿರುಗಿಸಿದ.

## ಸೆರಿನಾನಿನ ತೋಟ

ಆರೆಂಜ್ ಪಟ್ಟಣ ಸೇರಿದ ಫೇಬರ್ ಅಲ್ಲಿನ ಪ್ರಶಾಂತ ಪ್ರದೇಶ ಒಂದನ್ನು ಹುಡುಕಿಕೊಂಡ. ಅಂದರೆ ಊರಿನಾಚೆಗೆ ಹೊಲಗದ್ದೆಗಳ ಮಧ್ಯೆ ಏಕಾಂಗಿಯಾಗಿ ನಿಂತಿದ್ದ ಮನೆಯನ್ನು ವಾಸಕ್ಕೆ ಆರಿಸಿದ. ಅಲ್ಲಿಗೆ ಸ್ವಲ್ಪ ದೂರದಲ್ಲಿ ಸಾವಿರಾರು ವರ್ಷಗಳ ಕೆಳಗೆ ರೋಮನ್ನರು ಕಟ್ಟಿದ್ದ ದೊಡ್ಡದೊಂದು ನಾಟಕ ಶಾಲೆಯ ಅವಶೇಷವಿತ್ತು. ಫೇಬರ್ ಆ ಊರಿನಲ್ಲಿದ್ದಷ್ಟು ವರ್ಷವೂ ಅಲ್ಲಿಗೆ ಸುತ್ತಾಡಲು ಹೋಗುತ್ತಿದ್ದ. ಫೇಬರನ ಮನೆಯ ಕಿಟಕಿಗೆ ಬಹು ದೂರದವರೆಗೆ ಹರಡಿದ್ದ ಹೂಬಿಟ್ಟ ಮೈದಾನವೂ ಅದರಾಚೆಗಿದ್ದ ಬೆಟ್ಟಗಳ ಸಾಲೂ ಸುಂದರವಾಗಿ ಕಾಣುತ್ತಿದ್ದುವು. ಇನ್ನೊಂದು ಪಾರ್ಶ್ವಕ್ಕೆ ದಾರಿಯುದ್ದಕ್ಕೂ ನಿಂತ ಪ್ಲೇನ್ ಮರಗಳು ಮರ್ಮರ ಶಬ್ದ ಮಾಡುತ್ತಿದ್ದುವು. ಅಲ್ಲಿ ವರ್ಷವೆಲ್ಲ ಹಕ್ಕಿಗಳು ಹಾಡುತ್ತಲೇ ಇರುತ್ತಿದ್ದುವು. ವಸಂತಋತುವಿನಲ್ಲಿ ತಿತ್ತಿರಿಗಳ ಮೇಳವೇ ಅಲ್ಲಿ ಏರ್ಪಡುತ್ತಿತ್ತು. ಫೇಬರ್ ಅಲ್ಲಿ ನೆಲೆಸಿ ಒಂಭತ್ತು ವರ್ಷಗಳಾದ ಮೇಲೆ ಒಂದು ದಿನ, ಅಲ್ಲಿನ ಜಮೀನ್ದಾರ ಹಣದಾಸೆಗಾಗಿ ಆ ಪೈನ್ ಮರಗಳನ್ನು ಕಡಿಸಿ ಬಿಟ್ಟ. ಅದರಿಂದ ಫೇಬರನಿಗೆ ಬಹಳ ದುಃಖವಾಗಿ, ಆ ಊರನ್ನೇ ಬಿಡುವಂತಾಯಿತು.

ಅಲ್ಲಿದ್ದಾಗ ಫೇಬರನ ಜೀವನ ಸಂತೋಷದಿಂದಲೇ ಕಳೆಯಿತು. ಆದರೆ ಅವನಿಗೆ ಹಣದ ಕೊರತೆ ಇದ್ದೇ ಇತ್ತು. ಶಾಲೆಗಳಿಗಾಗಿ ವಿಜ್ಞಾನದ ಪಠ್ಯಪುಸ್ತಕಗಳನ್ನು ಬರೆದ. ಆದರೆ ಅವಕ್ಕೆ ಈಗ ದುಡ್ಡು ಬರುವಂತೆ ಆಗ ಬರುತ್ತಿರಲಿಲ್ಲ. ಆಮೇಲೆ ಆವನು ತನ್ನ ಅನರ್ಘ್ಯವಾದ ' ಸೊವೆನೀರ್ ಎಂಟಮಾಲಜಿಕ್ಸ್ ' ನ ಮೊದಲನೆಯ ಸಂಪುಟವನ್ನು ಪ್ರಕಟಿಸಿದ.

" ಹಾಗೆಂದರೇನು "? ಕೇಳಿದ ಸೀನು.

ಅಂದರೆ ಕೀಟಶಾಸ್ತ್ರದಲ್ಲಿ ಆವನು ನಡೆಸಿದ ಸಂಶೋಧನೆಗಳನ್ನು ಒಳಗೊಂಡ ಮೊದಲನೆಯ ಸಂಪುಟ ಅಷ್ಟೆ. ಅದಕ್ಕೆ ಇಟ್ಟ ಹೆಸರು ಆಕರ್ಷಕವಾಗಿರಲಿಲ್ಲ. ಹಾಗಾಗಿ ಅದನ್ನು ಓದಿದವರು ಎಲ್ಲೋ ಕೆಲವರು. ಆದರೆ ಅದು ಕಾದಂಬರಿಗಳಿಗಿಂತ ಮೋಹಕವಾದ ಪುಸ್ತಕ ಎಂಬುದನ್ನು ಅದನು ಓದಿದವರು ಬಲ್ಲರು.

ಫೇಬರನಿಗೆ ತನ್ನ ಮಕ್ಕಳಲ್ಲಿ ಬಹಳ ಪ್ರೀತಿ. ಆರೆಂಜಿನಲ್ಲಿದ್ದಾಗ ಅವನ ಮಗ ಜೂಲ್ಸ್ ಕಾಲವಾದ. ಅಂತಹ ದುಃಸ್ಥಿತಿಯಲ್ಲಿ ಫೇಬರ್ ಪುತ್ರಶೋಕವನ್ನೂ ಅನುಭವಿಸಿ ಕೊರಗಿದ. ಫೇಬರ್ ತನ್ನ ಸಂಸಾರವನ್ನು ಬಹಳ ಹಚ್ಚಿಕೊಂಡಿದ್ದ. ಆದ್ದರಿಂದಲೆ ಮನೆಮಂದಿಯೆಲ್ಲ ಒಂದಾಗಿ ಅವನ ಕೆಲಸ ಮಾಡಿಕೊಡುತ್ತಿದ್ದರು. ನಗು ಮುಖದ ಫೇಬರ್ ತನ್ನ ಕೆಲಸವನ್ನು ಅವರ ಆಟವಾಗಿ ಮಾರ್ಪಡಿಸಿ ಅವರಿಗೆ ತೃಪ್ತಿ ಸಂತೋಷ ಗಳನ್ನು ಉಂಟುಮಾಡುತ್ತಿದ್ದ. ಅವನ ಹಿರಿಯ ಮಕ್ಕಳಾದ ಆಂಟೋನಿಯಾ, ಕ್ಲೇರ್, ಜೂಲ್ಸ್, (ಕೊನೆಕೊನೆಗೆ ಈ ಮಗ ಕಾಲವಾದದ್ದು) ಮತ್ತು ಎಮಿಲಿ ಅವನ ಕೆಲಸಕ್ಕೆ ಬೇಕಾದ ಸಹಾಯಗಳನ್ನೆಲ್ಲ ಮಾಡುತ್ತಿದ್ದರು. ಅವರು ಬೇರೆ ಊರಿಗೆ ಹೋದಾಗಲೂ ಅಲ್ಲಿಂದ ಅವನಿಗೆ ಚಿತ್ರ ವಿಚಿತ್ರ ಹೂಗಳು, ಕೀಟಗಳು ಅವುಗಳ ಗೂಡುಗಳು, ಮೊಟ್ಟೆಗಳು ಮುಂತಾದುವನ್ನು ಕಳಿಸುತ್ತಿದ್ದರು. ಆದರೆ ಎಲ್ಲರಿಗಿಂತ ಕಿರಿಯವನಾದ ಪಾಲ್ ತಂದೆಯ ಜೊತೆಗೆ ಬಹಳ ಆಸಕ್ತಿಯಿಂದ ಕೆಲಸ ಮಾಡುತಿದ್ದ. ಫೇಬರನ ಪುಸ್ತಕಗಳ ತುಂಬ ಆ ಪುಟ್ಟ ಹುಡುಗನ ಹೆಸರಿದೆ.

"ಹೌದು. ನವಿಲುಗಣ್ಣಿನ ಪತಂಗದ ಕಥೆಯಲ್ಲಿ ಅವನ ಹೆಸರು ಬಂದಿದೆ." ಕಣ್ಣರಳಿಸಿ ಹೇಳಿದ ಸೀನು.

"ಹೌದು. ಅವನು ದೊಡ್ಡವನಾದ ಮೇಲೆ ತಂದೆಯ ಪುಸ್ತಕಗಳನ್ನೆಲ್ಲ ಸಂಪಾದಿಸಿ, ಚಿತ್ರಗಳನ್ನು ಹಾಕಿಸಿ ಅಚ್ಚು ಮಾಡಿಸಿದ. ಇನ್ನೂ ಎಳೆಯವನಾಗಿದ್ದಾಗಲೇ ಅವನಿಗೆ ಯುಕ್ತಾಯುಕ್ತ ಪರಿಜ್ಞಾನ ಬಹಳ. ಅವನಿಗೆ ಯಾವುದನ್ನು ಕಂಡರೂ ಸ್ವಲ್ಪವೂ ಭಯವೇ ಇರಲಿಲ್ಲ. ಯಾವ ಕೀಟ ಸಿಕ್ಕಿದರೂ ಅದನ್ನು ಅಂಗೈಯಲ್ಲಿಟ್ಟುಕೊಂಡು ತಂದುಬಿಡುತ್ತಿದ್ದ. ಒಂದೇ ಮಾತಿನಲ್ಲಿ ಹೇಳುವುದಾದರೆ ಇಡೀ ಸಂಸಾರ ಒಟ್ಟಿಗೇ ಕೆಲಸ ಮಾಡುತ್ತಿತ್ತು. ಇಂದಿಗೂ ಫೇಬರನ ಮನೆಯಲ್ಲಿ, ಆತ ಮತ್ತು ಅವನ ಪತ್ನಿ, ಮಕ್ಕಳು ಎಲ್ಲರೂ ತೋಟದಲ್ಲಿ ದುಂಬಿಯ ನೆಲಮಾಳಿಗೆಯ ಮನೆಯನ್ನು ಇಣುಕಿ ನೋಡುತ್ತಾ ತೆಗೆಸಿಕೊಂಡ ಚಿತ್ರವಿದೆ. ಅಂತಹ ಕೆಲಸಗಳು ಅವರ ಪಾಲಿಗೆ ಆಟವಾಗಿದ್ದುವು. ಆದರೆ ಅವರಿಗಿನ್ನೂ ಸ್ವಲ್ಪ ಹಣದ ಅನುಕೂಲತೆ ಇದ್ದಿದ್ದರೆ....?

ಅವರು ಅಲ್ಲಿಂದ ಮುಂದೆ ‘ ಸೆರಿನಾನ್ ’ ಎಂಬ ಹಳ್ಳಿಗೆ ಹೊರಟರು. ಅಲ್ಲಿ ಫೇಬರನ ಬಹಳ ದಿನಗಳ ಆಸೆಯೊಂದು ಫಲಿಸಿತು. ಯಾರ ಅಡ್ಡಿಯೂ ಇಲ್ಲದ ಬಯಲಿನ ಪ್ರಯೋಗಶಾಲೆಯೊಂದು ಅವನ ಕೀಟಶಾಸ್ತ್ರದ ವ್ಯಾಸಂಗ ಕ್ಕಾಗಿ ಅವಶ್ಯವಿತ್ತು. ಈ ಹಳ್ಳಿಯಲ್ಲಿ ಕಲ್ಲು ಗುಡ್ಡಗಳಿಂದ ಕೂಡಿದ ವಿಸ್ತಾರವಾದ ಪ್ರದೇಶವೊಂದು ಸುಲಭ ಬೆಲೆಗೆ ಸಿಕ್ಕಿತು. ಅದು ಯಾವ ಬೆಳೆಗೂ ಅನುಕೂಲವಲ್ಲದ ಭೂಮಿ. ಯಾರೋ ಉಪಯೋಗ ಬರುವ ಮರಗಳನ್ನು ನೆಟ್ಟು, ಉಳಲು ಪ್ರಯತ್ನಿಸಿ, ವಿಫಲರಾಗಿ, ಅರ್ಧಕ್ಕೆ ಕೈ ಬಿಟ್ಟಿದ್ದರು. ಫೇಬರ್ ಅದರ ಸುತ್ತ ಕಲ್ಲಿನ ಗೋಡೆಯೊಂದನ್ನು ಕಟ್ಟಿಸಿ, ಒಂದು ಪಕ್ಕಕ್ಕೆ ತನ್ನ ಉಪಯೋಗಕ್ಕೊಂದು ಮನೆಯನ್ನು ಕಟ್ಟಿಕೊಂಡು ಅಲ್ಲಿ ವಾಸ ಹೂಡಿದ.

ದೇಶವಿದೇಶದ ತನ್ನ ಗೆಳೆಯರು ಕಳಿಸಿದ ಅಪರೂಪದ ಸಸ್ಯಗಳನ್ನು ತನ್ನ ತೋಟದಲ್ಲಿ ನೆಟ್ಟು ಬೆಳೆಸಿದ ಫೇಬರ್. ಅವುಗಳಲ್ಲೆಷ್ಟೋ ಅಲ್ಲಿನ ಬಿಸಿಲನ್ನೂ, ಬಿರುಗಾಳಿಯನ್ನೂ ತಡೆಯಲಾರದೆ ಹೋದುವು. ಅಂಥವಕ್ಕೆ ಒಂದು ಗಾಜಿನ ಮನೆ ಮಾಡಿ ಅಲ್ಲಿ ಅವುಗಳಿಗೆ ಆರೈಕೆ ನಡಸಿದ. ಆದರೂ ಅದು ನೀವು ಅಪೇಕ್ಷಿಸುವ ಗುಲಾಬಿ ಹೂಗಳಿಂದ, ಕ್ರೋಟನ್ ಗಿಡಗಳಿಂದ, ಚಿಮ್ಮುವ ನೀರಿನ ಚಿಲುಮೆಗಳಿಂದ ಕೂಡಿದ ಸೊಗಸಿನ ತೋಟವಲ್ಲ. ಆದರೆ ಅದರದೇ ಒಂದು ರೀತಿಯ ಸೌಂದರ್ಯ. ಅದು ವರ್ಷದ ಎಲ್ಲಾ ಕಾಲದ ಲ್ಲಿಯೂ ನಾನಾ ಬಗೆಯ ಕೀಟಗಳಿಂದ ಅದಕ್ಕೆ ಬೇಕಾದ ಸಸ್ಯಗಳಿಂದ ಕೂಡಿ ಝೇಂಕಾರ ನಾದದಿಂದ ತುಂಬಿದ ನಂದನ. ನೋಡುವುದಕ್ಕೆ ಆ ಕೀಟಗಳು ಫೇಬರನ ಪ್ರಯೋಗಗಳಿಗಾಗಿಯೇ ಬಂದು ಅಲ್ಲಿ ನೆಲೆಸಿದೆಯೋ ಏನೋ ಎನ್ನಿಸಬೇಕು, ಅಷ್ಟು ಸರಾಗವಾಗಿ, ಸ್ವಚ್ಛಂದವಾಗಿ ಅವು ಇಂದಿಗೂ ಜೀವಿಸಿವೆ.

ಇತರ ಎಷ್ಟೋ ಪ್ರಯೋಗಶಾಲೆಗಳಲ್ಲಿ ಜನ ಸತ್ತ ಕೀಟಗಳನ್ನೂ ಅವುಗಳ ಅಂಗಾಂಗಗಳನ್ನೂ ಪರೀಕ್ಷಿಸುತ್ತಾರೆ. ಆದರೆ ಫೇಬರ್ ತನ್ನ ಈ ತೋಟದ ಪ್ರಯೋಗ ಶಾಲೆಯಲ್ಲಿ ಕೀಟಗಳನ್ನು ಅವುಗಳ ಜೀವಿತ ಕಾಲ ದಲ್ಲೇ ಪರೀಕ್ಷಿಸಿದ. ಅವು ಬೇಟೆಯಾಡುವಾಗ, ಮನೆಕಟ್ಟುವಾಗ, ಪ್ರಣಯ ದಾಟದಲ್ಲಿ ತೊಡಗಿದಾಗ, ಮರಿಗಳಿಗೆ ಉಣಿಸುವಾಗ, ಅದಕ್ಕೆ ವಿದ್ಯೆ ಕಲಿಸು

ವಾಗ, ಕೊನೆಗೆ ಅವು ಸಾಯುವವರೆಗೂ ಫೇಬರನ ಆತ್ಮೀಯವಾದ ನೋಟ ಅವುಗಳನ್ನು ಹಿಂಬಾಲಿಸುತ್ತಿತ್ತು.

ಫೇಬರ್ ತನ್ನ ನಂದನವನ್ನು ವರ್ಣಿಸುತ್ತಾ "ಯಾರಿಗೂ ಬೇಡದ ಆ ಪ್ರದೇಶ, ದುಂಬಿಗಳು ಕಣಜಗಳ ಪಾಲಿಗೆ ಸ್ವರ್ಗವೇ ಸರಿ. ಕೀಟಗಳನ್ನು ಬೇಟೆಯಾಡುತ್ತಾ ನನ್ನ ಜೀವಮಾನವನ್ನೇ ಕಳೆದಿದ್ದೇನೆ. ಆದರೆ ಇದು ವರೆಗೆ ಅವು ಹಾಗೆ ಒಂದೇ ಕಡೆ ಕಿಕ್ಕಿರಿದಿರುವುದನ್ನು ನೋಡಿರಲಿಲ್ಲ." ಎಂದಿದ್ದಾನೆ. ಮುಂದೆ ಆ ಕೀಟಗಳ ಗುಣಗಾನ ಮಾಡುತ್ತಾ, "ನಾವು ಕಂಡರಿಯದ ತಂತ್ರಗಳನ್ನು ಉಪಯೋಗಿಸಿ ಬೇಟೆಯಾಡುವವರು ಇವರು. ಇವರೇನು ಸಾಮಾನ್ಯರಲ್ಲ. ಕೆಲವರು ಕೆಮ್ಮಣ್ಣಿನಲ್ಲಿ ಮನೆ ಕಟ್ಟುತ್ತಾರೆ. ಹಲವರು ಹತ್ತಿ ರೇಷ್ಮೆಗಳನ್ನು ನೇಯಲು ಬಲ್ಲವರು. ಎಲೆಗಳ ಚೂರಿನಲ್ಲೇ ತಮ್ಮ ಪ್ರಪಂಚವನ್ನೆಲ್ಲಾ ಪೂರೈಸಬಲ್ಲವರೂ ಇದ್ದಾರೆ ಇಲ್ಲಿ. ಜಾಳು ಜಾಳಾದ ಗುಡಿ ಗೋಪುರಗಳನ್ನು ಕಟ್ಟುವ ಶಿಲ್ಪಿಗಳು ಬೇಕಾದರೆ ಹೀಗೆ ಬನ್ನಿ. ಗಾರೆ ಕಲೆಸಿ ಗಿಲಾವು ಮಾಡುವವರು, ಮರಗಳನ್ನು ಕೊರೆದು ಬಡಗಿ ಕೆಲಸ ಮಾಡುವವರು, ನೆಲವನ್ನು ತೋಡಿ ನೆಲಮಾಳಿಗೆ ನಿರ್ಮಿಸುವ ವರು ಎಷ್ಟು ಜನ ಬೇಕು ನಿಮಗೆ?" ಎಂದಿದ್ದಾನೆ.

ಜೊತೆಗೆ ವಸಂತ ಋತುವಿನಲ್ಲಿ ಮನೆಯ ಮುಂದಿನ ಕೊಳಕ್ಕೆ ಅರ್ಧ ಮೈಲಿ ಸುತ್ತು ಮುತ್ತಿನ ಪ್ರದೇಶದ ಕಪ್ಪೆಗಳೆಲ್ಲ ವಲಸೆ ಬರುತ್ತವೆ. ಇರು ಳೆಲ್ಲ ಅವುಗಳ ಮೇಳ. ಆಗ ಫೇಬರನ ಮನೆಯವರಿಗೆ ಊಟದ ಸಮಯದಲ್ಲಿ ಮಾತು ಕತೆಗಾಗಲೀ, ನಿದ್ದೆಗಾಗಲೀ ಅವಕಾಶವೇ ಇಲ್ಲ.

ಫೇಬರನ ಮನೆಯ ವಿಷಯ ಸ್ವಲ್ಪ ಹೇಳೋಣ. ಆ ಮನೆಗೆ ಗುಲಾಬಿ ಬಣ್ಣ ಹಚ್ಚಿದೆ. ಬಾಗಿಲು, ಕಿಟಕಿ, ಗವಾಕ್ಷಗಳೆಲ್ಲ ಹಸಿರು ಬಣ್ಣ ದವು. ಅವನ ದೊಡ್ಡ ಓದುವ ಕೋಣೆ ಯಾವಾಗಲೂ ನಿಶ್ಶಬ್ದವಾಗಿರುತ್ತಿತ್ತು. ಅಲ್ಲಿ ಗಲಾಟೆ ಮಾಡುವ ಧೈರ್ಯವಿದ್ದುದು ದಾರಿ ತಪ್ಪಿದ ಕಣಜಕ್ಕೋ ದುಂಬಿಗೋ ಮಾತ್ರ. ಫೇಬರನ ಸಂಸಾರ ಯಾವ ಊಟ ತಿಂಡಿಗಳನ್ನು ಬಯಸಿದರೂ, ಉಂಡರೂ, ಅವನು ಮಾತ್ರ ಜೀವಹಿಂಸೆಗೆ ಹಿಂದೆಗೆಯು ತ್ತಿದ್ದ. ಫೇಬರ್ ಸಾಧ್ಯವಾದ ಮಟ್ಟಿಗೂ ಹಣ್ಣು ಹಂಪಲು ಸಸ್ಯಗಳನ್ನು ಅವಲಂಬಿಸಿದ್ದ. ಆದರೆ ಮನೆಗೆ ಅತಿಥಿಗಳು ಬಂದರೆ ಅವರ ನಾಲಗೆಯ ರುಚಿಗೆ ಅಡ್ಡಿ ಇರುತ್ತಿರಲಿಲ್ಲ.

ಎಂತೆಂತಹ ದೊಡ್ಡ ಮನುಷ್ಯರೋ ಬಂದು ಅವನೊಡನೆ ನಾಲ್ಕು ಘಳಿಗೆ ಕಳೆಯಲು ಬಯಸುತ್ತಿದ್ದರು. ಆದರೆ ಅವನ ಸಹಾಯ ಅಪೇಕ್ಷಿಸುವವರು, ವ್ಯಾಸಂಗಕ್ಕಾಗಿ ಬಂದವರು ಇಂಥವರನ್ನು ಮಾತ್ರ ಅವನು ವಿಶ್ವಾಸದಿಂದ ಸ್ವಾಗತಿಸುತ್ತಿದ್ದ. ಬರಿಯ ಡಂಬಾಚಾರದವರು, ತೋರಿಕೆಯ ಕುತೂಹಲವುಳ್ಳವರು, ದೊಡ್ಡಮನುಷ್ಯ ಆದ್ದರಿಂದ ನೊಡೋಣ ಎನ್ನುವವರು, ಇವರನ್ನೆಲ್ಲ ಅವನು ಹತ್ತಿರ ಸೇರಿಸುತ್ತಲೇ ಇರಲಿಲ್ಲ. ಒಮ್ಮೆಯಂತೂ ಸುಮ್ಮನೆ ಅವನನ್ನು ಕಾಣಲು ಬಂದ ಒಬ್ಬ ಗಣರಾಜ್ಯ ಸಂಘದ ಅಧ್ಯಕ್ಷನನ್ನು ಫೇಬರ್ ನೋಡಲೂ ಇಷ್ಟಪಡಲಿಲ್ಲ. ಕೊನೆಗೆ ನೋಡಿದರೂ ಮಾತನಾಡಲು ಒಪ್ಪದೆ ಅವನನ್ನು ಹಿಂದಕ್ಕೆ ಕಳಿಸಿಬಿಟ್ಟ. ಅಂತಹ ನಿರ್ದಯತೆ ಅವನ ಅಮೂಲ್ಯವಾದ ಕಾಲವನ್ನು ಕಾಪಾಡಿಕೊಳ್ಳುವುದಕ್ಕೆ ಅವಶ್ಯವಾಗಿತ್ತು.

ಆದರೆ ಅವನ ಇಬ್ಬರು ಗೆಳೆಯರಿಗೆ ಮಾತ್ರ ಅವನ ಹತ್ತಿರ ಬಹಳ ಸಲಿಗೆ ಇತ್ತು. ಎಂತಹ ಸಮಯದಲ್ಲೂ, ಕೊನೆಗೆ ಅವನ ವ್ಯಾಸಂಗದ ಕೋಣೆಗೂ ಪ್ರವೇಶಿಸುವ ಅಧಿಕಾರ ಅವರಿಗಿತ್ತು. ಅವರಲ್ಲೊಬ್ಬ ಆ ಹಳ್ಳಿಯ ಸ್ಕೂಲಿನ ಮಾಸ್ಟರು. ಇನ್ನೊಬ್ಬ ಮೇರಿಯಸ್ ಗಿಗ್ನಸ್ ಎಂಬ ಹೆಸರಿನ ಕುರುಡನಾದ ಬಡಗಿ. ಫೇಬರ್ ತಾನು ಬರೆದುದನ್ನೆಲ್ಲ ಅಚ್ಚಿಗೆ ಕಳಿಸುವ ಮೊದಲು ಅವರಿಬ್ಬರಿಗೂ ಓದಿ ತೋರಿಸುತ್ತಿದ್ದ. ಅವರಿಬ್ಬರ ಮುಖ ಚರ್ಯೆಯಿಂದಲೆ ತನ್ನ ಬರವಣಿಗೆ ಸ್ಫುಟವಾಗಿದೆಯೇ ಇಲ್ಲವೇ ಎಂಬುದನ್ನು ಕಂಡುಕೊಂಡು ತಿದ್ದಿಕೊಳ್ಳುತ್ತಿದ್ದ. ಎಷ್ಟೋ ವೇಳೆ ಮೇರಿಯಸ್ ಗಿಗ್ನಸ್ ಫೇಬರನ ಜೊತೆ ಸುತ್ತಾಡಲು ಹೋಗುತ್ತಿದ್ದ. ಫೇಬರ್ ದಾರಿಯಲ್ಲಿ ಯಾವುದಾದರೂ ಕೀಟವನ್ನು ಕಂಡು ನಿಂತರೆ, ಗಂಟೆಗಟ್ಟಲೆ ಅವನಿಗೆ ಛತ್ರಿ ಹಿಡಿದು ಮೇರಿಯಸ್ ನಿಂತಿರುತ್ತಿದ್ದ. ಫೇಬರನ ಇನ್ನೊಬ್ಬ ಗೆಳೆಯನೆಂದರೆ ಅವನ ಮುದಿ ತೋಟಗಾರ ಫೇವಿಯರ್. ಹಿಂದೆ ಅವನು ಸೈನಿಕನಾಗಿದ್ದು ಊರೂರು ತಿರುಗಿ ಬಹಳ ವಿಷಯಗಳನ್ನು ತಿಳಿದಿದ್ದ. ಅವನು ಎಷ್ಟೋ ಪ್ರಾಣಿಗಳನ್ನೂ ಸಸ್ಯಗಳನ್ನೂ ಅರಿತವನು. ಆದರೆ ಅವನಿಗಿದ್ದುದು ಅವುಗಳ ರುಚಿಯ ಪರಿಚಯ ಮಾತ್ರ.

ಫೇಬರನ ಸಂಸಾರ ಮತ್ತು ಆ ಇಬ್ಬರು ಸ್ನೇಹಿತರು ಸೇರಿ ಒಟ್ಟು ಎಂಟು ಜನರಾಗುತ್ತಿದ್ದರು. ಸಂಕೋಚದ ಮನುಷ್ಯನಾದ ಫೇಬರ್ ಇವ

ರಿಷ್ಟು ಜನರೆದುರಿಗೆ ತನ್ನ ಹುಚ್ಚುತನಗಳನ್ನು ನಿರಾಳವಾಗಿ ಪ್ರದರ್ಶಿಸು ತ್ತಿದ್ದ. ಹಬ್ಬದ ವೇಳೆಗೆ ಸರಿಯಾಗಿ ಫೇಬರನ ಉತ್ಸಾಹ ಏರುತ್ತಿತ್ತು. ಅವನ ಕಲ್ಪನೆ ಹೊಸ ಹೊಸ ಊಟ ತಿಂಡಿಗಳನ್ನು ಸೃಷ್ಟಿಸುತ್ತಿತ್ತು. ಅಂತಹ ನವೀನವಾದ ರುಚಿಯ ತಿಂಡಿಯನ್ನು ಆ ಇಬ್ಬರು ತಜ್ಞರು ಪರೀಕ್ಷಿಸಿ ಮೆಚ್ಚು ತ್ತಿದ್ದರು.

ಒಂದು ಸಲ ಫೇಬರನ ಕಲ್ಪನೆ ಹುಡುಕಿದ ತಿಂಡಿಯನ್ನು ವರ್ಣಿಸಿದರೆ ನಿಮ್ಮ ಬಾಯಲ್ಲಿ ನೀರು ಬರಬೇಕು. ಅದೇನು ಸಾಮಾನ್ಯವಾದ ತಿಂಡಿ ಎಂದುಕೊಳ್ಳಬೇಡಿ. ಬಹಳ ಹಿಂದೆ ರೋಮನ್ನರು, ಸೀಜರ್ ಮುಂತಾದ ವರು ಅದನ್ನು ತಿಂದು ಕೊಬ್ಬಿದ್ದರು. ಜೊತೆಗೆ ಫೇಬರನ ಗೆಳೆಯರೂ ಸಾಮಾನ್ಯರಲ್ಲ. ಕುರುಡನಾದರೂ ಮೇರಿಯಸ್ ಗಿಗ್ನಸನ ಗುಣ ಮೆಚ್ಚು ವಂಥದು. ಅವನು ಹುಟ್ಟು ಕುರುಡನಲ್ಲ. ಬೆಳಕು ಬಣ್ಣಗಳ ಸೌಖ್ಯವನ್ನನು ಭವಿಸಿ ಯೌವನದಲ್ಲಿ ದೃಷ್ಟಿ ಕಳೆದುಕೊಂಡಿದ್ದ. ಆಗಲೂ ಆತ ಎಂತಹ ಕತ್ತಲೆಯಲ್ಲೂ ತನ್ನ ಮರಗೆಲಸದ ಉಪಕರಣಗಳನ್ನು ಕಣ್ಣಿರುವವರು ಬೆಳಕಿ ನಲ್ಲಿ ಉಪಯೋಗಿಸುವುದಕ್ಕಿಂತ ಚೆನ್ನಾಗಿ ಉಪಯೋಗಿಸುತ್ತಿದ್ದ. ಅವನ ಮನಸ್ಸಿನ ನಗೆ, ಅವನ ಕಣ್ಣಿನ ಕೊರತೆಯನ್ನು ಮೀರಿ ಉಕ್ಕುತ್ತಿತ್ತು. ಕುರುಡನಾದುದರಿಂದಲೇ ನನಗೆ ಅನುಕೂಲವಾದ ಪೆನ್ಷನ್ ಸಿಕ್ಕಿರುವುದು ಎಂದು ಹೇಳಿಕೊಂಡು ಅವನು ಆಗಾಗ ನಗುತ್ತಿದ್ದ. ಅವನ ಕಿವಿ ಬಹಳ ಸೂಕ್ಷ್ಮ. ಫೇಬರ್ ಯಾವುದಾದರೂ ಸಾಮಾನು ತನ್ನ ಪ್ರಯೋಗ ಶಾಲೆಗೆ ಬೇಕಾದಾಗ ಅದನ್ನು ಅವನಿಗೆ ವಿವರಿಸಿ ಆವನ ಅಂಗೈಯ ಮೇಲೆ ಬೆರಳಿ ನಲ್ಲಿ ಚಿತ್ರ ಬರೆದು ಬಿಟ್ಟರೆ ಸಾಕು, ಸ್ವಲ್ಪವೂ ಕುಂದಿಲ್ಲದಂತೆ ಆ ಬಡಗಿ ಅಂತಹ ಸಾಮಾನು ಮಾಡಿ ತಂದುಕೊಡುತ್ತಿದ್ದ.

ಅವರೆಲ್ಲ ಚಳಿಗಾಲದ ಭಾನುವಾರಗಳಲ್ಲಿ ಫೇಬರನ ಜೊತೆಯಲ್ಲಿ ಬೆಂಕಿ ಕಾಯಿಸುತ್ತಾ ಮಾತಾಡುತ್ತಿದ್ದರು. ಅಂತಹ ಒಂದು ದಿನ ಫೇಬರ್ ತನ್ನ ಹೊಸ ತಿಂಡಿಯ ಬಗ್ಗೆ ಹೇಳಿದ. ಹಿಂದೆ ರೋಮನ್ನರು ಒಂದು ಬಗೆಯ ಕೀಟವನ್ನು ತಿನ್ನುತ್ತಿದ್ದರು. ಮೈಯೆಲ್ಲ ದಪ್ಪಗೆ ಕೊಬ್ಬು ತುಂಬಿದ ಅವು ಯಾರಿಗೂ ಪುಷ್ಟಿಕರವಾದ ಆಹಾರ.

ಒಂದು ಮಧ್ಯಾಹ್ನ ಮಚ್ಚು ತೆಗೆದುಕೊಂಡು ಫೇಬರನ ಮನೆಯವ ರೆಲ್ಲ ಸೇರಿ ಹೊರಟರು. ಹಳೆಯ ಮರದ ಪೊಟರೆಗಳನ್ನು ಹುಡುಕಿದರು.

ಮರಗಳ ತೊಗಟೆ ಮೇಲೆ ಒಣಗಿದ್ದರೂ ಒಳಭಾಗಗಳಲ್ಲಿ ಹಸಿ ಪಿಷ್ಟ ತುಂಬಿದ ಫಲಕಗಳೇ ಇವೆ. ಅವುಗಳಲ್ಲಿ ಹೆಬ್ಬೆರಳು ಗಾತ್ರದ ಹುಳುಗಳ ಗುಂಪೇ ಸೇರಿರುತ್ತವೆ. ಅವುಗಳ ಬಣ್ಣ ದಂತದ ಬಿಳುಪು. ಮೈ ದಮಾಸಿನಷ್ಟು ನುಣುಪು. ನೋಡಿದರೆ ಸಾಕು, ಆ ಬೆಣ್ಣೆಯ ಚೀಲಗಳು ಬಾಯಲ್ಲಿ ನೀರು ಬರಿಸುತ್ತವೆ. ಅವುಗಳನ್ನು ನಮ್ಮ ಕಡೆ ವಾಡೆಯ ಹುಳು, ಹುತ್ತದ ಹುಳು ಎನ್ನುತ್ತಾರೆ.

ಅವುಗಳನ್ನು ವ್ಯಾಸಂಗಕ್ಕೆ, ಊಟಕ್ಕೆ ಎಲ್ಲಕ್ಕೂ ಸಾಕಾಗುವಂತೆ ಬೇಕಾದಷ್ಟು ತುಂಬಿಕೊಂಡು ಹೊರಟರು. ಸಂಜೆಯ ಊಟಕ್ಕೆ ಅವುಗಳನ್ನು ಕೇಸರಿಬಣ್ಣಕ್ಕೆ ಬರುವವರೆಗೂ ಹುರಿದರು. ಅವು ಸುಯ್ಞ್ ಎಂದು ಸದ್ದು ಮಾಡುತ್ತಾ ಜಿಡ್ಡು ಬಿಟ್ಟುಕೊಂಡುವು. ಅದನ್ನು ತೆಗೆದು ಸ್ವಲ್ಪ ಉಪ್ಪು ಉದುರಿಸಿ ಬಿಸಿಬಿಸಿಯಾಗಿರುವಾಗಲೇ ತಟ್ಟೆಗಳಲ್ಲಿ ಬಡಿಸಿದರು. ಆದರೆ ಯಾರಿಗೂ ಮೊದಲು ರುಚಿ ನೋಡುವ ಧೈರ್ಯವಿಲ್ಲ. ಫೇಬರ್ ಒಂದನ್ನೆತ್ತಿ ಬಾಯಲ್ಲಿ ಹಾಕಿಕೊಂಡಾಗ ಸ್ಕೂಲು ಮಾಸ್ಟರು ಪ್ರಯತ್ನಪಟ್ಟ. ಅವನಿಗೆ ಹುಳುಗಳೆಂದರೆ ಸ್ವಲ್ಪ ಅಸಹ್ಯ. ಆದ್ದರಿಂದ ಚೂರು ತಿಂದು ಸುಮ್ಮನಾದ. ಆದರೆ ಬಡಗಿ ಧಾರಾಳವಾಗಿ ಅದನ್ನು ತಿಂದು ತೃಪ್ತಿಪಟ್ಟ. ಎಲ್ಲರೂ ಏಕಕಂಠದಿಂದ ರುಚಿಯಾಗಿದೆ ಎಂದು ಒಪ್ಪಿದರು. ಕೊನೆಗೆ ರಸರಸವಾಗಿ ಹುರಿದ ಬಾದಾಮಿಯಂತಿದೆ ಎಂದು ಅವರು ತೀರ್ಮಾನಿಸಿದರು.

"ಅಯ್ಯೋ ನಂಗೂ ಬಾಯಲ್ಲಿ ನೀರು" ಎಂದ ಸೀನು.

"ಜೊಲ್ಲು ಸುರಿಸಲು ಬಿಡಬೇಡ, ಭದ್ರವಾಗಿ ಬಾಯಿಮುಚ್ಚಿಕೊ" ಹಾಸ್ಯ ಮಾಡಿದಳು ವಸಂತಿ.

"ಆಮೇಲೆ ?" ಅದು ಬಾಲು.

"ಫೇಬರನ ದಿನಚರಿಯನ್ನು ಸ್ವಲ್ಪ ನೋಡಬಹುದು. ಅವನ ಕೊಠಡಿ ಯಾವಾಗಲೂ ಅಚ್ಚುಕಟ್ಟಾಗಿರುತ್ತಿತ್ತು. ಅವನ ಬರವಣಿಗೆಯೂ ಅಷ್ಟೆ. ಸ್ಪಷ್ಟವಾದ ಶುಭ್ರವಾದ ಬರವಣಿಗೆ. ಬೆಳಗಿನ ವೇಳೆಯಲ್ಲಿ ಪ್ರಕೃತಿಯಂತೆಯೇ ಅವನ ಮನೆಯೂ ಶಾಂತವಾಗಿರಬೇಕು ಎಂಬುದು ಅವನ ಇಷ್ಟ. ಬೆಳಗಿನ ವೇಳೆಯಲ್ಲಿ ಇಬ್ಬನಿಯಿಂದ ಕೂಡಿದ ಹುಲ್ಲಿನ ಮೇಲೆ ಸುತ್ತಾಡಿ ತನ್ನ ಸಸ್ಯಗಳು, ಪೊದೆಗಳನ್ನು ಪರೀಕ್ಷಿಸುತ್ತಿದ್ದ. ನಂತರ ಬೆಳ

ಗಿನ ತಿಂಡಿ ತೀರ್ಥಗಳಾದ ಮೇಲೆ ಓದುವ ಕೊಠಡಿಯಲ್ಲಿ ಸ್ವಲ್ಪ ಹೊತ್ತು ಶತಪಥ ಹಾಕಿ ತನ್ನ ಮೈಯಿನ ಲವಲವಿಕೆಯನ್ನೆಲ್ಲ ಸಂಪೂರ್ಣವಾಗಿ ಅನುಭವಿಸಿ, ನಂತರ ಬರೆಯಲು ಕೂಡುತ್ತಿದ್ದ. ತನ್ನ ಕೊಠಡಿಯ ನಿಶ್ಯಬ್ದ ನೀರವತೆಯಲ್ಲಿ ಕರಗಿಹೋಗುತ್ತಿದ್ದ. ಅವನನ್ನು ಅಡ್ಡಿಪಡಿಸಿದವರ ಗತಿ ಪೂರೈಸಿಹೋಗುತ್ತಿತ್ತು. ಇಡೀ ದಿನ ಕೀಟಗಳನ್ನು ಗಮನಿಸುತ್ತ ಅಥವಾ ಗಮನಿಸಿದ್ದನ್ನು ಬರೆಯುತ್ತಾ ಕಳೆದುಹೋಗುತ್ತಿತ್ತು. ರಾತ್ರಿ ಹನ್ನೆರಡು ಗಂಟೆಯ ವೇಳೆಗೆ ಮೈಯಿನ ಶಕ್ತಿಯನ್ನೆಲ್ಲ ವ್ಯಯಿಸಿ ಬಿಳಿಚಿಕೊಂಡ ಮುಖದಿಂದ ನಿದ್ದೆಗೆ ಹೊರಡುತ್ತಿದ್ದ. ಇರುಳು ಅವನಿಗೆ ರಜ.

ಅವನ ಜೀವನದ ಕೊನೆಕೊನೆಯ ವೇಳೆಗೆ ಅವನ ಮಕ್ಕಳು ಮದುವೆಯಾಗಿ ತೆರಳಿದ್ದರು. ಆ ವೇಳೆಗೆ ಕೀಟಶಾಸ್ತ್ರವನ್ನು ಕುರಿತ ಅವನ ಗ್ರಂಥ ಸಂಪುಟ ಸಂಪುಟವಾಗಿ ಪ್ರಕಟವಾಗಿತ್ತು. ಹದಿನೆಂಟು ವರ್ಷಗಳ ಕಾಲ ಸೆರಿನಾನಿನಲ್ಲಿ ನಡೆದ ಅವನ ಸಂಶೋಧನೆಗಳೂ ಲೇಖನಗಳೂ ಅವನ ಕೀರ್ತಿಯನ್ನು ಪ್ರಪಂಚದಲ್ಲೆಲ್ಲ ಹರಡಿದ್ದುವು. ಕೊನೆಯ ಕೆಲವು ವರ್ಷಗಳಲ್ಲಿ ಎಲ್ಲರೂ ಅವನನ್ನು ಗೌರವಿಸುವ ವೇಳೆಗೆ ಅವನ ಮನೆಯಲ್ಲಿ ಉಳಿದಿದ್ದವನು ಅವನೊಬ್ಬನೆ. ೧೯೧೫ ರ ಅಕ್ಟೋಬರ್ ೧೧ ನೆಯ ತಾರೀಖು ಬಹಳ ಶಾಂತವಾಗಿ ತನ್ನ ಮನೆಯಲ್ಲೇ ಕಾಲವಾದ ಫೇಬರ್. ಅಲ್ಲಿಗೆ ತೊಂಭತ್ತೆರಡು ವರ್ಷಗಳ ಅವನ ಜೀವನಯಾತ್ರೆ ಸಫಲವಾಗಿ ಮುಕ್ತಾಯವಾಯಿತು.

"ಅವನು ಎಷ್ಟು ಪ್ರಾಣಿಗಳ ಜೀವನ ಬರೆದಿದ್ದಾನಕ್ಕ?" ಕೇಳಿದ ಬಾಲು.

"ಸುಮಾರು ೨೧೮ ಕಥೆಗಳನ್ನು ಬರೆದಿದ್ದಾನೆ. ಒಂದಕ್ಕಿಂತ ಒಂದು ಚೆಂದ, ಒಂದಕ್ಕಿಂತ ಒಂದು ವಿಚಿತ್ರ.

"ಅಲ್ಲಿಗೆ ಪ್ರಪಂಚದಲ್ಲಿರುವ ಜೀವಿಗಳ ವಿಷಯ ಎಲ್ಲ ಮುಗಿದೇ ಹೋಯ್ತೇನಕ್ಕಾ?" ಏನೋ ಯೋಚಿಸುತ್ತ ಕೇಳಿದ ಬಾಲು. ಸೀನು ವಸಂತಿಯರನ್ನೂ ಆ ಪ್ರಶ್ನೆ ಕಾಡುತ್ತಿತ್ತು.

"ಇಲ್ಲ ಮರಿ, ಇನ್ನೂ ಬೇಕಾದಷ್ಟಿದೆ. ಅದಕ್ಕೆ ಕೊನೆಯೆಲ್ಲಿ?"

---

# ಪರಿಭಾಷೆ

| | |
|---|---|
| Languidoc Scorpion | — ಚೇಳು |
| The digger Wasp | — ಕಣಜ |
| The Sacred Beetle | — ಬೂವಾಡಿ (ಸಗಣಿ ದುಂಬಿ) |
| The Tarantula | — ಹೆಜ್ಜೇಡ |
| The Peacock moth | — ನವಿಲುಗಣ್ಣಿನ ಪತಂಗ |
| The Praying Mantis | — ಒಂಟಿ ಹುಳು (ಸೂರ್ಯನ ಕುದುರೆ) |
| Grass hopper | — ಹುಲ್ಲು ಮಿಡಿತೆ |
| The Cricket | — ಚಿಮ್ಮೊಂಡೆ |
| The Cicada | — ತಿತ್ತಿರಿ |
| The Pine cock chafer | — ಪೈನ ಮರದ ಪಿಸ್ತುಗಾರ |
| Weevils or Cossus | — ಹುತ್ತದ ಹುಳು (ವಾಡೇಹುಳು) |
| The Stone Chat | — ಕಲ್ಲು ಕುಟಿಗನ ಹಕ್ಕಿ |
| Caterpillar | — ಕಂಬಳಿ ಹುಳ |

ಇದೇ ಲೇಖಕರ ಇತರ ಕೃತಿಗಳು:

**ಶಾಲೆಯ ಮಕ್ಕಳು** (ಅನುವಾದ)

**ಮೇಕೆ ಮತ್ತು ಅದರ ಮೂರು ಮರಿಗಳು** (ಅನುವಾದ)

**ಸಿಂಹದ ಮೇಲೆ ಸವಾರಿ** (ಅನುವಾದ)